# ಜಪಸಾರ

ಶ್ರೀಯುತ ರಂ. ಶ್ರೀ. ಮುಗಳಿಯವರ ಮುನ್ನುಡಿಯೊಡನೆ

ಎಸ್. ವಿ. ಪರಮೇಶ್ವರಭಟ್ಟ

ಪ್ರಕಾಶಕರು:
ಎಸ್. ವಿ. ಪರಮೇಶ್ವರಭಟ್ಟ, ಎಂ. ಎ.
ಕನ್ನಡ ಅಧ್ಯಾಪಕ
ಇಂಟರ್‌ಮೀಡಿಯೆಟ್ ಕಾಲೇಜು
ತುಮಕೂರು

ಪ್ರಥಮ ಮುದ್ರಣ
೧೯೪೩


ಬೆಲೆ: ಒಂದು ರೂಪಾಯಿ

ಮುದ್ರಕರು:
ಶ್ರೀ ಪಾಂಡುರಂಗ ಪ್ರೆಸ್
ತುಮಕೂರು

# ಮುನ್ನುಡಿ

'ರಾಗಿಣಿ'ಯನ್ನು ಕನ್ನಡಪ್ರಪಂಚಕ್ಕೆ ನೀಡಿ ಪರಿಚಿತರಾದ ಶ್ರೀ ಪರಮೇಶ್ವರಭಟ್ಟರು 'ಜಸನಾರ' ಎಂಬ **ವಿರಾಗಿಣಿಯನ್ನು** ಈಗ ನೀಡಿದ್ದಾರೆ. ಇದರಲ್ಲಿ ರಾಗಿಣಿಯ ರಾಗಾವೇಶವು ವಿರಾಗಿಣಿಯ ಚಿತ್ತ-ಶಾಂತಿಯಿಂದಲೂ ತತ್ತ್ವಚಿಂತನೆಯಿಂದಲೂ ಕಳೆದುಹೋಗದೆ ಕಳೆ-ಗೊಂಡಿದೆ. ಒಟ್ಟಿನಲ್ಲಿ ವಿರಾಗಿಣಿಯ ವ್ಯಕ್ತಿಯು ಇವರ ಸ್ಥಾಯಿಯೆನ್ನಲು ಅಡ್ಡಿಯಿಲ್ಲ.

ಹೊಸಗನ್ನಡದಲ್ಲಿ ಭಾವಗೀತೆಯ ಬೆಳೆ ಹುಲುಸಾಗಿದ್ದರೂ ಕಥನಕವಿತೆ ಮೊದಲಿನಿಂದ ಅಲ್ಲಲ್ಲಿ ಬೆಳೆದಿದೆ, ಕೆಲವು ಕಡೆ ಎತ್ತರವಾಗಿ ಮುಗಿಲು ಮುಟ್ಟಿದೆ. ಸರಳರಗಳೆ ಸಾಮಾನ್ಯವಾಗಿ ಅದರ ಛಂದೋರೂಪ. ಆದರೆ ಬೇರೆ ಪದ್ಯಘಾಟಿಗಳಲ್ಲಿಯೂ ಅದು ಮೈದೋರಿದೆ. ಬಹುಶಃ ಮಾಸ್ತಿಯವರ 'ಸ್ವಪ್ನಗಳ ಹೆಸರುಗಳು' ಎಂಬ ಕವನದಿಂದ ಈ ಬಗೆಯ ಬರೆವಣಿಗೆ ಮೊದಲಾಯಿತು. ರಸಿಕನಾದ ಕತೆಗಾರನ ಸಹಜವಾದ ಸೊಲ್ಲೇ ಕವಿತೆಯಾದಂತೆ ಇಲ್ಲಿ ತೋರಿತು. ಶ್ರೀನಿವಾಸರ ಕೈಯಲ್ಲಿ ಸರಳರಗಳೆ ಸರಸವಾಯಿತು, ರಗಳೆಯಾಗಲಿಲ್ಲ, ರಸದೂಟವಾಯಿತು. 'ಮದಲಿಂಗನ ಕಣಿವೆ' ಅವರ ಸಿದ್ಧಿಗೆ ಒಳ್ಳೆಯ ಗುರುತು. ಮುಂದೆ ಪುಟ್ಟಪ್ಪನವರ 'ಕಿಂದರಿಜೋಗಿ ಮತ್ತು ಇತರ ಕವನಗಳು' ಕಥನಕವಿತೆಯಲ್ಲಿ ತಿಳಿನಗೆ, ಓಟ, ಕಲ್ಪಕತೆ, ಪದಸಂಪತ್ತಿ ಈ ಗುಣಗಳನ್ನು ತಲೆದೋರಿಸಿದುವು. ಅವರ 'ಚಿತ್ರಾಂಗದಾ' ಎಂಬುದು ಅವರ ಪರಿಪಾಕವಾಯಿತು. ಬೇರೆ ಕವಿಗಳೂ ಈ ಕ್ಷೇತ್ರದಲ್ಲಿ ಕಾಲಿಟ್ಟರು. ಉದಾಹರಣೆಗೆ ಸಾಲಿಯವರ ಅಭಿಸಾರ, ಆನಂದಕಂದರ ವಿರಹಿಣಿ, ಶಂಕರಭಟ್ಟರ ನಲ್ಮೆ ಇವನ್ನು ನೆನೆಯಬಹುದು. ಶಂಕರಭಟ್ಟರ ನಲ್ಮೆ-ಯಲ್ಲಿ ಕಥನಕಲೆಯೊಡನೆ ಭಾವಗೀತೆಯ ಆತ್ಮಾವಿಷ್ಕಾರವು ಬೆರೆತು-ಕೊಂಡಿತು. ವಿಶೇಷವಾಗಿ ಅವರ 'ಮಾದ್ರಿಯ ಚಿತೆ' ಕವಿಯ ದರ್ಶನ-ವನ್ನು ಕಥೆಯಾಗಿ ಮೂಡಿಸಿದ ಒಂದು ಹಿರಿಯ ಕವಿತೆ. ಇತ್ತೀಚೆ ಶ್ರೀನಿವಾಸರು ಬರೆದ ಗೌಡರಮಲ್ಲಿ ಮತ್ತು ರಾಮನವಮಿ ಎಂಬ

ಕಥನಕವನಗಳಲ್ಲಿ ಅವರ ಶಕ್ತಿ ವ್ಯಾಗಿ ಪರಿಪಕ್ವತೆಯನ್ನು ಹೊಂದಿದೆ. ಆವೆರಡೂ ಹೊಸಗನ್ನಡಕ್ಕೆ ಚಿರವಾದ ಕಾಣಿಕೆಗಳು. ರಾಮನವಮಿ ಕಥನಕಲೆಯ ಸಹಜತೆಯೊಡನೆ ಕವಿಯ ದರ್ಶನವನ್ನು ರಮ್ಯವಾಗಿ ಹೆಣೆದಿದೆ. ಹೊಸಗನ್ನಡದ ಆರಂಭಕ್ಕಿದ್ದ ಭಾವಗೀತೆಯ ಉಕ್ಕು ಇಂದು ಇಳಿದಿದೆ. ಕೇವಲ ಕಥನದ ವ್ಯಕ್ತಿನಿರಪೇಕ್ಷತೆಗೂ ಅವಕಾಶವಿಲ್ಲ. ಬರಲಿರುವ ಕಾವ್ಯವು ಬಹುಶಃ ಕಥನದ ಬಹಿರಂಗದಲ್ಲಿ ಭಾವಗೀತೆಯ ಅಂತರಂಗವನ್ನು ಹಾಸುಹೊಕ್ಕಾಗಿ ಸೇರಿಸುವುದು, ಯಾರದೋ ಕತೆಯೆಂಬುವ ಹೊರರೂಪಿನಲ್ಲಿ ತನ್ನದೇ ಒಳದಿರುಳನ್ನು ಕವಿ ತುಂಬಿ ತುಳುಕಿಸುವನು. ಈ ಬಗೆಯಲ್ಲಿ ಪ್ರಗತಿಪರವಾದ ಕನ್ನಡಕಾವ್ಯಕ್ಕೆ ಒಂದು ನಿದರ್ಶನವೆಂಬಂತೆ 'ಜಹನಾರ' ಕೃತಿಯು ತೋರುತ್ತದೆ.

ಈ ಕೃತಿಯ ಕಥನರೀತಿ 'ಜಹನಾರ'ಳ ಆತ್ಮಕಥೆಯ ಸ್ವರೂಪದ್ದು. ಆ ಮೊಗಲ ರಾಜಕುಮಾರಿ ತನ್ನ ಬಾಳಿನ ಕೊನೆಯ ದಿನಗಳಲ್ಲಿ ಸೆರೆಯಲ್ಲಿದ್ದರೂ ಮನಸ್ಸನ್ನು ಹಿಂದಣ ಕಾಲದಲ್ಲಿ ಹರಿಬಿಟ್ಟು ತನ್ನ ನೋವುನಲಿವುಗಳನ್ನು ನೆನೆಯುತ್ತಾಳೆ. ತನ್ನ ನಲ್ಲನಾದ ರಜಪೂತ ವೀರನೊಡನೆ ತಾನು ಅನುಭವಿಸಿದ ರಸನಿಮಿಷಗಳನ್ನು ಚಿತ್ರಿಸುತ್ತಾಳೆ. ತಾನು ಪಡೆದ ಶಾಂತಿಯನ್ನೂ ಅರಿತ ತತ್ತ್ವವನ್ನೂ ಅರುಹುತ್ತಾಳೆ. ಹೀಗೆ ಪೂರ್ವಸ್ಮರಣದ ಅದ್ಭುತ ರಮ್ಯ ಅಂಶಗಳು ಇದರಲ್ಲಿ ಪ್ರಮುಖ-ವಾಗಿವೆ. ಅವುಗಳ ಮೇಲೆಲ್ಲ ಜಹನಾರಳ ಪ್ರೌಢಮತಿಯ ಶಾಂತಿಭಕ್ತಿ-ಗಳು ತಮ್ಮ ಬೆಳಕನ್ನು ಬೀರಿವೆ. ನಡುನಡುವೆ ಹಿನ್ನೆಲೆಯಾಗಿ ಸೃಷ್ಟಿ-ವರ್ಣನೆಗಳು ಬಂದಿವೆ. ಈ ನೂತನರೂಪದಲ್ಲಿ ಕಥನವು ಕುಂದದಂತೆ ಕಾವ್ಯಸತ್ತ್ವವು ಅಬಾಧಿತವಾಗಿ ಉಳಿಯುವಂತೆ ಕೃತಿಯನ್ನು ರಚಿಸಿದ ಕವಿಗಳನ್ನು ನಾನು ಮನವಾರೆ ಅಭಿನಂದಿಸುತ್ತೇನೆ.

'ಜಹನಾರ'ಳು ಇಲ್ಲಿಯ ಮುಖ್ಯಪಾತ್ರ. ಅವಳು ನೆನೆದ ಹಳೆಯ ಸವಿನೆನಪುಗಳಿಂದ ಅವಳ ಉದಾತ್ತ ಸ್ವಭಾವವು ಚಿತ್ರಿತವಾಗಿದೆ. ಅವಳ ಪ್ರೇಮವೆಷ್ಟು ಗಾಢವೋ ತ್ಯಾಗವೂ ಅಷ್ಟೇ ದೃಢವಾಗಿದೆ. ಕೊನೆಗೆ ಬಂಧನದಲ್ಲಿಯ ಅವಳ ಮನಸ್ಸು ಮುಕ್ತಿಯ ಶಾಂತಿಯನ್ನು ಪಡೆ-ಯಿತು. ಚರಿತ್ರೆಯ 'ಜಹನಾರ'ಳು ಇಷ್ಟು ಪರಿಪೂರ್ಣಳಾದ ಆದರ್ಶ

ರಮಣಿಯಾಗಿದ್ದಳೇ ಎಂಬುದು ಈ ಕೃತಿಗೆ ಪ್ರಸ್ತುತವಲ್ಲ. ಚರಿತ್ರೆಯ ಮೂಲವು ಇಲ್ಲಿಯ ಕಾವ್ಯಮಂದಿರಕ್ಕೆ ತಳಹದಿ ಮಾತ್ರ. ಅವಳು ನಿವೇದಿಸಿದ ನೆನಪುಗಳಲ್ಲಿ ಸುಳಿಯುವ ಅವಳ ನಲ್ಲನ ಪಾತ್ರವು ಕ್ಷತ್ರಿಯ ವೀರನಿಗೆ ಒಪ್ಪುವಂತೆ ಬಂದಿದೆ. ಈ ಕೃತಿಯನ್ನು ಮೇಲೆಮೇಲೆ ಓದಿದಾಗ 'ಹಳೆಯ ಹಾಡಿನ ನುಡಿಯನಿನ್ನೇಕೆ ನುಡಿಸುವುದು?' ಎಂಬುದಾಗಿ ಕವಿಯ ಪ್ರಶ್ನೆಯನ್ನೇ ಕವಿಗೆ ಕೇಳುವಂತಾಗಬಹುದು. ಹಿಂದಣ ಬಾಳಿನ ಕಥನದಲ್ಲಿ ಕವಿಗೆ ಒಂದು ತೃಪ್ತಿಯಿದೆ ಆದರಲ್ಲಿಯೂ ಈ ಕೃತಿಗೆ ಇಂದಿನ ಧ್ವನಿಯೊಂದು ಇದರ ಗತಿಗತಿಯಲ್ಲಿ ನುಡಿಯುತ್ತದೆ ಜಹನಾರಳಂಥ ತಪ್ತಹೃದಯಗಳು ಎಂದಿನಿಂದಲೂ ದೈವಹತವಾದ ಭಾರತವನ್ನು ಕಂಡು ಮರುಗಿವೆ, ತ್ಯಾಗಪೂತವಾಗಿ ತತ್ತ್ವಚಿಂತನೆಯಲ್ಲಿ ಮುಂದಿನ ದಾರಿಯನ್ನು ಅರಿತಿವೆ. ಈ ರಸವ್ಯಂಗ್ಯವು ಈ ಕೃತಿಯ ಮಹತಿಯನ್ನು ಹೆಚ್ಚಿಸಿರುತ್ತದೆ. ಇಲ್ಲಿ ಕವಿಯ ಆತ್ಮವು ತನ್ನ ಅಂತರಂಗವನ್ನು ಜಹನಾರಳ ಮೂಲಕ ತೋಡಿಕೊಂಡಿದೆ.

ಈ ಕವಿತೆಯಲ್ಲಿಯ ಕಲ್ಪನಾಶಕ್ತಿ ಮೆಚ್ಚುವಂಥದು, ಆಗಾಗ ಅದು ಮೇಲಟ್ಟಕ್ಕೆ ಏರುವುದು ಅನೇಕ ಕಡೆಗೆ ಅದು ಒಂದು ಚಿಕ್ಕ ಇಲ್ಲವೆ ದೊಡ್ಡ ಉಪಮೆಯಾಗಿದ್ದರೆ ಒಮ್ಮೊಮ್ಮೆ ಉಪಮಾವಳಿಯಾಗಿ ರೂಪಕವಾಗಿ ಹಬ್ಬಿದೆ ವರ್ಣನೆಗಳಲ್ಲಿ ಸೂಕ್ಷ್ಮನಿರೀಕ್ಷಣೆಯ ನೋಟವಿದೆ, ಸೌಂದರ್ಯಮುಗ್ಧವಾದ ಕವಿಹೃದಯವಿದೆ, ಬಿಡಿಬಿಡಿಸಿ ಬಣ್ಣಿಸುವ ಕೈವಾಡವಿದೆ ಸರಳರಗಳೆಯ ರೂಪವು ಕವಿಯ ಸಾವಧಾನದ ಅಭಿವ್ಯಕ್ತಿಗೆ ಎಲ್ಲ ಅವಕಾಶವನ್ನು ಕಲ್ಪಿಸಿಕೊಟ್ಟಿದೆ ರಚನೆಯ ದೃಷ್ಟಿಯಿಂದ ನೋಡಿದರೆ ಶ್ರೀನಿವಾಸರ ಸರಳಸುಂದರಶೈಲಿಯೂ ಪುಟ್ಟಪ್ಪನವರ ಪ್ರೌಢರಮ್ಯರೀತಿಯೂ ಈ ಕೃತಿಯಲ್ಲಿ ಒಂದಾಗಿವೆ.

ಈ ಕೃತಿಯನ್ನು ಮೆಚ್ಚುವ ಕಾಲದಲ್ಲಿ ಇದರಲ್ಲಿ ನುಸುಳಿದ ಲೋಪದೋಷಗಳ ಅರಿವು ನನಗಿದೆ, ಕವಿಗೂ ಇರುವುದೆಂದು ನಾನು ಭಾವಿಸುತ್ತೇನೆ. ಸವಿನೆನಪುಗಳ ನೂರಾರು 'ದೃಶ್ಯಜ್ಯೋತಿರ್ಮಾಲೆ' ಮೂಡಿ ಬರುತ್ತಿಹವೆಂದು ಜಹನಾರಳು ಹೇಳುತ್ತಾಳೆ, ಅವುಗಳಲ್ಲಿ ಎರಡುಮೂರು ಇಲ್ಲಿ ಮೂಡಿವೆ. ಆದರೆ ಆ ಪ್ರಣಯಿಗಳ ಪ್ರಣಯಜೀವನದ ಮೊದಲು,

ಅದರ ಬೆಳವಣಿಗೆಯಲ್ಲಿ ಬಂದ ಎಡರುತೊಡರುಗಳು, ಅವರು ಅವನ್ನು ಮೀರಿ ನಿಂತ ನೆಲೆ ಇವನ್ನು ಚಿತ್ರಿಸಬೇಕಾಗಿತ್ತು. ಮೊಗಲಕುಮಾರಿಯು ಹೆಚ್ಚುಕಡಿಮೆ ಹಿಂದಕ-ಮಾರಿಯಂತೆ ಭಾವಭಾಷೆಗಳಲ್ಲಿ ತೋರುತ್ತಾಳೆ. ಈ ಅಸಹಜತೆಯನ್ನು ಕಳೆಯಬಹುದಾಗಿತ್ತು. ತತ್ತ್ವಭಾಗದಲ್ಲಿ ಸಂದರ್ಭಕ್ಕೆ ಹೊಂದಿಕೆ ಬೇಕು. ಕೊನೆಯ ಮಂಗಳಶ್ಲೋಕ ತೇಪ ಹಚ್ಚಿದಂತಿದೆ. ಶೈಲಿಯಲ್ಲಿ ವಿಸ್ತಾರವಿದ್ದಂತೆ ಶೈಥಿಲ್ಯವೂ ಅಲ್ಲಲ್ಲಿ ಕಾಣುತ್ತದೆ. ಪದರಚನೆಯ ಪದ್ಯಬಂಧದ ಬಿಗುವು ಹೆಚ್ಚಬೇಕಿತ್ತು ಹೊಸಗನ್ನಡ ಕವನದಲ್ಲಿ ಹಳಗನ್ನಡ ರೂಪಗಳ, ವಿಶೇಷವಾಗಿ ಬಿಂದುಗಳ ಹಾವಳಿಯನ್ನು ತಪ್ಪಿಸಬಹುದಾಗಿತ್ತು.

ಶ್ರೀ ಪರಮೇಶ್ವರಭಟ್ಟರ ಈ ಎರಡನೆಯ ಕಾವ್ಯಗ್ರಂಥ ಅವರ ಮುನ್ನಡೆಯ ಗುರುತಾಗಿದೆ ಇವರ ಈ ಕೃತಿಯನ್ನು ಕನ್ನಡರಸಿಕರು ಪ್ರೀತಿಯಿಂದ ಬರಮಾಡಿಕೊಂಡು ತಮ್ಮ ಆನಂದವನ್ನು ಹೆಚ್ಚಿಸಬೇಕು, ಇವರಿಂದ ಇನ್ನೂ ಹಿರಿದಾದ ಕೃತಿಗಳು ಹೊರಬೀಳುವಂತೆ ಸಹೃದಯತೆಯನ್ನು ತೋರಿಸಬೇಕು. ಇದೇ ನನ್ನ ಮನದಾಸೆ

೩೦ ೪ ೧೯೪೩ **ರಂ. ಶ್ರೀ. ಮುಗಳಿ**

# ಬಿನ್ನಹ

ಜಹನಾರ ಮೊಗಲ್ ಚಕ್ರವರ್ತಿ ಷಹಜಹಾನನ ಮಗಳು, ಔರಂಗಜೇಬನ ಸಹೋದರಿ. ಷಹಜಹಾನನ ಇಳಿವಯಸ್ಸಿನಲ್ಲಿ ಆತನ ಮೇಲೆ ದಂಗೆಯೆದ್ದು ಔರಂಗಜೇಬನು ದೆಹಲಿಯ ಸಿಂಹಾಸನವನ್ನು ಆಕ್ರಮಿಸಿ ತಂದೆಯನ್ನು ಸೆರೆಯಲ್ಲಿಟ್ಟು ಇತರ ಮೂವರು ಸಹೋದರರಾದ ದಾರ, ಷೂಜ, ಮುರಾದರನ್ನು ಕೊಲ್ಲಿಸಿ ತಾನೆ ದೇಶವನ್ನು ಆಳಲು ಮೊದಲು ಮಾಡಿದನಷ್ಟೆ. ಈ ಸಂದರ್ಭದಲ್ಲಿ ಜಹನಾರ ತಂದೆ ಷಹಜಹಾನನ ಮತ್ತು ಹಿರಿಯ ಅಣ್ಣ ದಾರನ ಪಕ್ಷವನ್ನು ವಹಿಸಿ ಅವರಿಗೆ ನೆರವಾಗಿ ನಿಂತುದರಿಂದ ಆಕೆಯನ್ನೂ ಔರಂಗಜೇಬನು ಬಂಧನದಲ್ಲಿಡಿಸಿದನು. ಜಹನಾರ ರಜಪೂತವೀರನೊಬ್ಬನನ್ನು ರಹಸ್ಯವಾಗಿ ಪ್ರೀತಿಸುತ್ತಿದ್ದಳು ಆತ ಈಕೆಯ ರಕ್ಷಣೆಗಾಗಿ ಕಂಕಣತೊಟ್ಟು ಷಾಜಹಾನ ದಾರರ ಪಕ್ಷ-ವಹಿಸಿ ಔರಂಗಜೇಬನ ದಾಳಿಯನ್ನು ಎದುರಿಸಿ ವೀರಮರಣವನ್ನು ಪಡೆದನು ಮುಂದೆ ಔರಂಗಜೇಬನಿಂದ ಬಂಧಿತಳಾದ ಜಹನಾರ ತನ್ನ ಕಡೆಯ ದಿನಗಳನ್ನು; ಸೆರೆಮನೆಯಲ್ಲಿಯೇ ಇದ್ದು, ತಂದೆ ಮಡಿದ ಸುದ್ದಿಯನ್ನೂ ದಾರಾದಿಗಳು ಹತರಾದುದನ್ನೂ ತನ್ನ ಪ್ರೀತಿಯ 'ರಕ್ಷಾಬಂಧಿ' ಯುದ್ಧದಲ್ಲಿ ಮಡಿದುದನ್ನೂ ಕೇಳಿ, ಕಳೆದುಹೋದ ವೈಭವದ ದಿನಗಳನ್ನೂ ರಸನಿಮಿಷಗಳನ್ನೂ ನೆನೆನೆನೆದು, ಕೊನೆಗೆ ತತ್ವಚಿಂತಾ-ಸಕ್ತಳಾಗಿ ಶಾಂತಮನಸ್ಕಳಾಗಿ ಇಹಲೋಕವನ್ನು ತ್ಯಜಿಸುವಳು

ಇದಿಷ್ಟು ಇತಿಹಾಸ ಈ ಇತಿಹಾಸದ ತಡಿಕೆಯ ಮೇಲೆ ನನ್ನ ಊಹಾಪೋಹಗಳಿಂದ ತಿಪ್ಪಿ ಬೆಳೆಸಿದ ಕಲಾಕಲ್ಪಕತೆಯ ಕಾವ್ಯಲತೆ ಹಬ್ಬಿ ಹೊರವಾದ ಹಂದರವಾಗಿರುವುದನ್ನು ವಾಚಕರು ಗಮನಿಸ-ಬಲ್ಲರು. ಇತಿಹಾಸಕ್ಕೆ ವಿರೋಧವಾಗದಂತೆ ಜಹನಾರಳ ಕಡೆಯ ದಿನಗಳ ಚಿತ್ರ – ಮುಖ್ಯವಾಗಿ ಆಕೆಯ ಮನಃಪ್ರಪಂಚದ ಬಿಸಿಲು ಬೆಳುದಿಂಗಳುಗಳ ಚಿತ್ರ – ಇಲ್ಲಿ ಒಡೆದು ಕಾಣುವಂತೆ ಈ ನೀಳ್ಗವನ-ವನ್ನು ರಚಿಸಿದ್ದೇನೆ ಇದರ ಮೇಲೆ ಎಲ್ಲಿಯಾದರೂ ಚಾರಿತ್ರಿಕ ಹಿನ್ನೆಲೆ ವಿರೋಧವಾಗಿರುವುದಾದರೆ ಇದು ಕಾವ್ಯವೆಂಬುದನ್ನೂ ಇಲ್ಲಿ ಚರಿತ್ರೆ

ಗೌಣ ಕಲ್ಪನೆ ಪ್ರಧಾನ ಎಂಬುದನ್ನೂ ವಾಚಕರು ಮರೆಯಬಾರದಾಗಿ ವಿನಂತಿ.

ಸಾಂಗ್ಲಿಯ ವಿಲಿಂಗ್ಡನ್ ಕಾಲೇಜಿನ ಪ್ರೊ|| ರಂ. ಶ್ರೀ ಮುಗಳಿ, ಎಂ ಎ., ಬಿ ಟಿ, ಅವರು ಈ ಕೃತಿಯನ್ನು ವಿಶ್ವಾಸದಿಂದ ಓದಿನೋಡಿ ತಮ್ಮ ಸಹಜಸುಂದರವಾದ ನುಡಿಮಲ್ಲಿಗೆಯ ಮುನ್ನುಡಿಯನ್ನು ಅನುಗ್ರಹಿಸಿದ್ದಾರೆ. ಅವರ ಈ ಮುನ್ನುಡಿಯ ಮಲ್ಲಿಗೆ ಮುಡಿದು ನನ್ನ ಕೃತಿ ಅಮೂಲ್ಯವಾಗಿದೆ. ಈ ಅನುಗ್ರಹಕ್ಕಾಗಿ ಶ್ರೀ ಮುಗಳಿಯವರಿಗೆ ನಾನು ಕೃತಜ್ಞನಾಗಿದ್ದೇನೆ

ಮುದ್ರಣದ ಪ್ರತಿಯನ್ನು ಸಿದ್ಧಗೊಳಿಸುವುದರಲ್ಲಿ ಸಹಾಯಮಾಡಿದ ನನ್ನ ಸಹಧರ್ಮಿಣಿ ಸೌ|| ರಾಜಲಕ್ಷ್ಮಿಯ ಉಪಕಾರವನ್ನು ಇಲ್ಲಿ ಸಂತೋಷದಿಂದ ಸ್ಮರಿಸುತ್ತೇನೆ

ಪುಸ್ತಕವನ್ನು ಎಂದಿನಂತೆ ಸಕಾಲದಲ್ಲಿ ಸುಂದರವಾಗಿ ಅಚ್ಚುಮಾಡಿರುವ ತುಮಕೂರಿನ ಶ್ರೀ ಪಾಂಡುರಂಗ ಮುದ್ರಣಾಲಯದ ವ್ಯವಸ್ಥಾಪಕರಿಗೆ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ.

೫ ೫ -೪೩ }
ತುಮಕೂರು }

ಎಸ್. ವಿ. ಪರಮೇಶ್ವರಭಟ್ಟ

## ಗತಿ ೧

ಕಾಲಚಕ್ರಭ್ರಮಣ ಪಥಮಧ್ಯದೊಳಗಿಂದು
ಸಂಕ್ರಾಂತಿ ಸಮಯದಲಿ ಸಿಲುಕಿರುವ ಹೇ ಜನನಿ !
ಜನ್ಮಭೂಮಿಯೆ, ತಾಯೆ ! ಓ ದೇವಿ, ಭಾರತಿಯೆ !
ಯಾಜ್ಞಸೇನಿಯ ತೆರದಿ ಮತ್ತೇಕೆ ನಿಂದಿರುವೆ
ರುಧಿರಾಭಿಷೇಕದಲಿ ? ಮತ್ತೇಕೆ ಮಿಂದಿರುವೆ
ರಣಯಜ್ಞವೇದಿಯಲಿ ? ಇನ್ನಾವ ದೀಕ್ಷೆಯಿಂ-
ದಾರಿಗಾಹುತಿಯಿತ್ತು ಏನ ನೀಂ ಪಡೆಯಲಿಹೆ ?
ಬಲಿ ನಿಂದು, ಆಹುತಿ ಮುಗಿದು, ಯಜ್ಞ ಕೊನೆಗೊಂಡು
ಕಂಕಣಂ ಕಳೆದಂದು ಮಂಗಳೋದಕ ಮಿಂದು,
ವಿಜಯಮಾಲಿಕೆ ಧರಿಸಿ ಕೃತಕೃತ್ಯಳೆನೆ ಮೆರೆದು
ಶುಭಮನೆಮಗೆಂದೀವೆ ? ಸುಖಮನೆಮಗೆಂದೀವೆ ?
ಸತ್ಯಮಂ ಧರ್ಮಮಂ ಜನದ ಕಲ್ಯಾಣಮಂ
ಶಾಂತಿಯಂ ದಾಂತಿಯಂ ದೇಶದೌನ್ನತ್ಯಮಂ
ಎಂದು ನೀಂ ಸಾಧಿಸುವೆ ! ಜನಕೆ ಸದ್ಗತಿಯೀವೆ ?
ಗುಡ್ಡಕಣಿವೆಗಳಲ್ಲಿ ವಿಸ್ಫೋಟಗಳ ಆನೆ
ಘೀಳಿಡುತೆ ಕೆರಳುತಿಹ, ಕೆರಳಿ ಮುಂಬರಿಯುತಿಹೆ
ವಿಕ್ಷುಬ್ಧವಾರಿಧಿಯ ಕಲ್ಲೋಲವಾದಂತೆ
ಕ್ರಾಂತಿಕಾರಕವಾತದಾಘಾತದಿಂದುಬ್ಬಿ
ಜಾನಪದ ಸಾಗರಂ ಕೆರಳಿ ಪ್ರತಿಭಟಿಸುತಿದೆ
ಸೇನೆ, ಆತ್ಮವಿನಾಶ ಸೂಚಕೋನ್ಮಾದದಿಂ
ಸಾಗುತಿದೆ. ಲಕ್ಷೋಪಲಕ್ಷ ಜೀವಿಗಳ ಬಲಿ
ಬೀಳುತಿದೆ. ಬೀಳುತಿವೆ ರಣಯಜ್ಞಕುಂಡದಲಿ
ಮೃತ್ಯುಮುಖಿ ದೇಹಿಗಳಸಂಖ್ಯಾತ ಸಂಖ್ಯೆಯಲಿ.

ಧರ್ಮಬಾಹಿರನಿಂತು ಕ್ರೌರ್ಯದಲಿ ನೆಲೆ ನಿಂತು
ದೇಶದಾದ್ಯಂತಮಂ ರಕ್ತಧುನಿಯೊಳಗದ್ದಿ
ಮಣಿಮಯಮಯೂರಸಿಂಹಾಸನದ ಲೋಭದಿಂ
ದಾಳಿಯಿಟ್ಟೈದಿದಂ ದೆಹಲಿ ಪರ್ಯಂತರಂ.
'ಯುದ್ಧದಲಿ ಗೆದ್ದಂದು ಗದ್ದುಗೆಯನೇರುವೆಂ
ಮಡಿದಂದು ಮಣ್ಣಡಿಯ ಗೋರಿಯೊಳಗುರುಳುವೆಂ
ಗೋರಿಯೋ ಗದ್ದುಗೆಯೊ ಒಂದನೆಂತಾದರುಂ
ಸಾಧಿಸದೆ ಬಿಡೆನೆಂದು ಪಣತೊಟ್ಟನೆಂ'ಬಂತೆ
ಸೋದರರ ತರಿದೊಟ್ಟಿ, ಬಂಧುಗಳನಿಕ್ಕಿನಿಸಿ,
ಮೊಗಲರಧಿರಾಜನಂ ಭರತಚಕ್ರೇಶನಂ
ತಂದೆಯುಂ ಪ್ರಾಜ್ಞನಂ ಆರ್ಯನಂ ಸೆರೆಗೈದು
ಔರಂಗಜೇಬಂ ತಾನೆ ರಾಜನೆಂದೆನಿಸಿದಂ

ಭಯಚಕಿತ ಜಾನಪದವಾತ್ಮರಕ್ಷಣೆಗಾಗಿ
ಕಟ್ಟದಿಂ ಪಗೋರ್ಗೆಟ್ಟಿ, ಯುದ್ಧದಲಿ ಮಡಿದವರ
ಎದೆಯುಗ್ಗಿಯಿಂ ಚಿಮ್ಮಿ ಹರಿದ ಕೆನ್ನೆತ್ತರಿಂ
ನಾಂದಂತ ಕೆಂಬಣ್ಣದಿಂ ಕಣ್ಣಿಗತಿಭಯಂ
ಕರವಾಗಿ ಸಾಮ್ರಾಜ್ಯದಾಹದ ಪೆಡಂಭೂತ
ಮೆನೆ ನಿಂದು ತೋರುತಿದೆ, ನೋಡುವರ ಎದೆ ಮನಂ
ಕರಗಿ ಮೂರ್ಛಾವೇಗದಲಿ ಪೈಮರೆಯುವಂತೆ.
ಯಮುನೆಯು ಮಹಾಪೂರವಿಂದಡಿಯೆ ಸುಳಿದು ತೆರೆ
ತೆರೆಯಾಗಿ ನೊರೆಗರೆದು ಕೆಂಪೇರಿ ಹರಿಯುತಿದೆ
ಮೊರೆಯುತೆ ನಿರಂತರಂ; ಮಾನವಂ ಗೈದಿರುವ
ಪಾಪದ ಕಳಂಕಮಂ ತೊಳೆದು ಪಾವನಗೈಯೆ
ಧರ್ಮಪುರುಷಂ ನಿಯೋಜಿಸಿದ ಯೋಗಿನಿಯಂತೆ

ರುಧಿರಮಯಕೋಟೆಯಂ ಸ್ಪರ್ಶಿಸಿದ ಯಮುನೆಯುಂ
ತಾಮ್ರಲೋಚನೆಯಾಗಿ ಕೆನ್ನೀರ ಹೊಳೆಯಾಗಿ
ಪಾಪಿಗಳ ಪಾಪಮಂ ಘಾತುಕರ ಹತ್ಯವಂ
ದ್ವೇಷಿಸುವಳೆಂಬಂತೆ ಓಡೋಡಿಹೋಗಿ ಕಡ–

ಲಾಣ್ಮಸಿಗೆ ನರನ ರಾಕ್ಷಸಬುದ್ಧಿಯಿಂದಾದ
ಕೆಂಗೊಲೆಯ ಚಿಹ್ನಮಂ ತೊಳೆವುದಸದಳವೆಂದು
ಮೊರೆಯಿಡುವಳೆಂಬಂತೆ ತೋರುತಿಹುದೆನಗಿಂದು
ಯಮುನೆಯಾಚೆಯ ದಡದ ಬಿತ್ತರದ ಬಯಲಿನಲಿ
ತಾಜಮಹಲಿನ ಸಮಾಧಿಸ್ತೂಪದುತ್ತುಂಗ
ಸೌಧಂ ವಿರಾಜಿಸಿದೆ, ಸಾತ್ವಿಕಪ್ರೇಮದಾ-
ನಂದದ ನಿದರ್ಶನದ ಧವಳಗಿರಿಯೆಂಬಂತೆ!
ಆಮಹಾಶ್ವೇತ ಶೀತಳ ಸೌಧವಡಿಯೊಳದಲಿ
ಭಾರತದ ಸಾಮ್ರಾಜ್ಞಿ ಷಾಜಹಾನನ ರಾಣಿ
ದಾರನುಮನೆಸ್ನುಮಂ ಪಡೆದಾ ಮಹಾತಾಯಿ
ಮೌನದಿಂ ಪವಡಿಸಿಹಳಾತ್ಮಸುಖ ನಿದ್ರೆಯಲಿ
ಅಂತಹಳ ನಿದ್ರೆಯುಂ ಭಂಗಗೊಂಡಂತಾಗೆ
ಅವಳ ಮಕ್ಕಳ್ ಮಿಡಿವ ರುದ್ರವೀಣಾನಾದ-
ದುನ್ಮಾದದಿಂದಾಕೆ ಕೋಪದಿಂದುರಿವಳೆನೆ
ಹಗಲಿನಲಿ ಬಿಸಿಲುಝಳದೆದುರಿನಲಿ, ಮೇಣಂತೆ
ಸಂಜೆಯಲಿ ಬೈಗುಗೆಂಪುರಿಯಲ್ಲಿ, ವಿಪ್ಲವದ
ಕ್ರಾಂತಿಪುರುಷಂ ತನ್ನ ಕೊಡಲಿಕಡೆಗೋಲಿಂದೆ
ರುಧಿರಾಬ್ಧಿಯಂ ಕಡೆಯೆ ನೊರೆನೊರೆದು ಕುದಿಗೊಂಡು
ಸಿಡಿವ ರಕ್ತಂ ಘನಿಸಿ ಉರಿವ ಹರಳಾದಂತೆ
ರಂಜಿಸುವುದಾಸೌಧ ರಮಣೀಯ ರೌದ್ರಮಂ
ಬೀರುತ್ತೆ ನೋಳ್ಪರಿಗಗುರ್ವಮದ್ಭುತವಾಗಿ!
ಅವಳ ಕರುಳಿನ ಬಳ್ಳಿ ಚಿಗುರಿ ದಾಂಗುಡಿಯಿಟ್ಟು
ಹಸುರುಹಂದರವಾಗಿ ಹೂವಾಗಿ ಹಣ್ಣಾಗಿ
ನೆರಳನಾಸರೆಯಾಗಿ ಹಬ್ಬುವುದನುಳಿದಿಂದು
ಕತ್ತರಿಸಿ ಬೀಳುತಿದೆ ಸೊರಗಿ ಸೊಪ್ಪಾಗುತಿದೆ
ಸೀದು ಕರಿಮುರಿಹೋಗಿ ಗಪ್ಪುಗಾರಾಗುತಿದೆ
ಅವಳ ಹೃದಯೇಶ್ವರಂ ಸಕ್ಕರೆಯ ಸವಿಯೊಲುಮೆ-
ಯಕ್ಕರೆಯ ಎರೆಯನವನಿಲ್ಲ ಸೆರೆಸಿಲುಕಿಹಂ

ಮಗನೆ ಕಾರಣವಾಗಿ ಆಸನ ಚ್ಯುತನಾಗಿ
ವೈಭವಂಗಳ ನೀಗಿ ಭ್ರಷ್ಟಸಾಮ್ರಾಟನಾಗಿ
ಮೊದಲೆ ವಿಧಿ ಹತನಾಗಿ ಗತಭಾಗ್ಯನೆನಿಸಿರ್ದ
ಅವಳ ಮಗ ದಾರನುಂ ಕೈತವಕೆ ತುತ್ತಾಗಿ
ತನ್ನನಿಂ ವಿಷವುಂಡು ಮಡಿದು ಮಲಗಿಹನಿಲ್ಲ
ಅವಳಿಲ್ಲ ನಂಟರುಂ ಮೇಣವಳ ಇಷ್ಟರುಂ
ಕತ್ತಲಯ ಕೋಣೆಯಲಿ ಯಾತನೆಯನನುಭವಿಸಿ
ನರಳುತಿಹರನುದಿನಂ ಮರಣದ ನಿರೀಕ್ಷೆಯಲಿ
ಇಂತೆಲ್ಲರಂ ಕೊಲಿಸಿ ಇಂತೆಲ್ಲರಂ ಅಳಿಸಿ
ಅವಳ ಕಿರಿಮಗನಿಂದು ಬಾದಷಹನೆಂದೆನಿಸಿ
ಅರಸುಬೆಳ್ಗೊಡೆ ಮುಕುಟ ಕರವಾಲಗಳ ಧರಿಸಿ
ಸಿಂಹಾಸನಂ ಏರಿ ಮಂತ್ರಿಸೇನಾನಿಗಳ
ಓಲಗದೊಳುರವಣಿಸಿ ಮೆರೆಯುತಿಹನವನಿಲ್ಲ
ಪ್ರಜೆಗಳುಂ ಪೌರರುಂ ರಾಜಸಾಮಂತರುಂ
ಕ್ಷೋಭೆಗೊಂಡವರಾಗಿ ಕುದಿಯುತಿಹರೊಳಗೊಳಗೆ.
ಎಷ್ಟುದಿನವಿನ್ನಿಂತು ನಾವು ನವೆಯುವುದೆಂದು
ಬಾಬರನ ಅಕ್ಬರನ ಷಾಜಹಾನನ ಬಳಿಕ
ಔರಂಗಜೇಬನವನೈತಂದು ಆ ಹೆಸರ
ಕೀರ್ತಿಯಂ ಕೆಡಿಸಿ ಅದಕಪಜಯದ ಮಸಿ ಬಳಿಯ-
ಲೆಂಬಂತೆ ಈತನನ್ಯಾಯದಿಂ ಭಾರತವ
ನಾಳುತಿಹನೆಂದು ಜನ ಮರುಗುತಿದೆ ಭಯದಿಂದೆ
ಷಾಜಹಾನನ ಬಳಿಕ ಭಾರತವ ಬೆಳಗುವರೆ
ದಾರನೆ ವಲಂ ತಕ್ಕನೆಂದೆಲ್ಲರಾಡಿದರ್!
ಆತನ ಮಹೋನ್ನತಿಯನೇನೆಂದು ನೆನೆದಪರ್!
ಅವನ ದಯೆಯನುಪಮಂ ಅವನ ಕ್ಷಮೆಯಸದೃಶಂ
ಅವನ ದೈವಪ್ರೇಮ ಅವನ ಧರ್ಮೋತ್ಸಾಹ-
ಮೊಂದೊಂದುಮದ್ಭುತಂ, ಅನ್ಯತ್ರ ದುರ್ಲಭಂ
ಇಂತೆಂದು ಪಾಡುವರ್ ಪೊಗಳುವರ್ ಜನಮಿಂದು.

ಆದರೇನೆಮಗಿಂದು ಆತ ದೊರಕುವನೇನು?
ರಜಪೂತರುಂ ಮೊಗಲರುಂ ಕೂಡಿ ಒಂದಾಗಿ
‘ಭಾರತೀಯರು ನಾವು’ ಎನುವ ಅಮೃತವಂ
ದಿನದಿನದ ಲೋಕಾನುಭವದಿಂದಲಾರ್ಜಿಸುತೆ
ರಾಷ್ಟ್ರಕಲ್ಯಾಣಮಂ ಸಾಧಿಸುವ ಸದ್ಬುದ್ಧಿ
ಆತನೊಡನೆಯೆ ನಮ್ಮ ಮಣ್ಣಾಗಿಹೋದತ್ತು,
ಇನ್ನೆಮಗೆ ಬೆಳಕೆಲ್ಲಿ! ಗೆಲುವೆಲ್ಲಿ! ಚೆಲುವೆಲ್ಲಿ!
ಅಮರ ಪದವಿಯುಗಳಿಸಿದಮೃತಲೋಕದ ತಾಯೆ!
ಅಳಿಯದಿರ! ಓದೇವಿ! ದುರ್ಭಾಗ್ಯರು ನಾವು ನ-
ಮ್ಮ ನೋವನರಿವಹುದೆ ನಿನಗಿಲ್ಲಿ? ಈಬಗೆಯ
ನಾರಕಿಗಳುತ್ಕಟದ ರೋದನಂ ನಿನಗಿಲ್ಲಿ
ಕೇಳುವುದೆ? ಕೇಳಿಸಿದರೇಕಿಂತು ಮೌನದಿಂ
ನಿದ್ರಿಸಿಹೆ? ಹೇ! ಎಚ್ಚರವಾಗು, ಮಕ್ಕಳಿಗೆ
ಸದ್ಬುದ್ಧಿಯನ್ನಿತ್ತು ಮೊದಲಂತೆ ಮತ್ತಂತೆ
ಭಾರತಂ ಸತ್ಯಧರ್ಮಂಗಳಿಂ ಸದ್ವಿದ್ಯೆ
ಕಲೆಗಳಿಂ ಕುಶಲಕರ್ಮಂಗಳಿಂ ಪ್ರೇಮದಿಂ
ಬೆಳಗುವಂದದಿ ಮಾಡು ಕಣ್ದೆರೆದು ನೋಡಮ್ಮ!
ನಮ್ಮವರ ಬೇನೆಬೇಸರಗಳ ನಿವೇದಿಸುತೆ
ಶೋಕದಿಂ ಮತ್ತೆ ಉದ್ವೇಗದಿಂ ನುಡಿದೆನ್ನ
ಮನ್ನಿಸುತೆ ಕಾಪಾಡು. ನಿನ್ನ ಮಗಳಾಂ ನೋಡು
ಅಡಿಗೆರಗುತಿಹೆನಿದೋ ಹರಸು ಅಭಯವನಿತ್ತು
ಹೃದಯದೌತ್ಸುಕ್ಯಮಂ ನೀಗಿ ಮನಸಿಗಾಹ್ಲಾದವಾಗಿ.

## ಗತಿ ೨

ಅಂಗುರೀಬಾಗಿನುದ್ಯಾನದೊಳಗಿಂದೇನು
ಒಂದೆಂದು ಕಾಣದಿಹ ಸೌಂದರ್ಯ ಸೂಸುತಿದೆ.
ಮಧುಮಾಸದಾನಂದ ವೈಪೆತ್ತು ತೋರುತಿದೆ
ಚಿತ್ರಚೈತ್ರೋತ್ಸವದಿ ಸೃಷ್ಟಿ ನಲಿದಾಡುತಿದೆ
ಚಿಗುರಿರುವುದಾವುವನ ಸಿಸುರಿ ಸನೆಕೊಸೆಸ್ರಾಗಿ
ಮನ್ಮಥೋತ್ಸವಕೆಂದು ನಿಂದ ತೇರಿಂಬಂತೆ
ಕೊಂಬೆಕೊಂಬೆಗೆ ಕುಳಿತ ಪಕ್ಷಿಪರಿಷನ್ಮೇಳ
ಗಾನಸುಧೆಯೊಳುಲಿಯುತಿದೆ ಸುಗ್ಗಿ ಸನ್ನಿಹಿತವೆನೆ.
ಬಳಿಯೆ ಜುಳುಜುಳನುಕ್ಕಿ ಹರಿವ ಕಾಲುವೆ ಜಲಂ
ಅಲೆಯು ಸುಳಿಸುಳಿಗೂಡಿ ನೊರೆಗರೆದು ರಚಿಸುತಿದೆ
ಚೆಲುವಿನಿಂಗಾರದಿಗೆಯ ಸರಸಂಚೆಯೋಲಗಕೆ.
ಭೃಂಗರಾಜನ ಬರವಿಗೆಣಿಗೈವಳಿಸೆ ಪದ್ಮೆ
ದಳಸಹಸ್ರಂ ಅರಳಿ ನಿಂದಿರುವಳೀಯೆಡೆಯೆ.
ಪಚ್ಚೆ ಹಾಸಿದ ಹಸುರು ಹುಲ್ಲುಕಾವಣಗಳಲಿ
ಬಿಳಿ ಕರಿಯ ನೀರ್ವಕ್ಕಿ ನೆರೆದೊಂದು ಗುಂಪಾಗಿ,
ಸೌಂದರ್ಯಲಕ್ಷ್ಮಿಯಂ ಸ್ವಾಗತಿಸಿ ಕರೆದಿತ್ತ-
ಲೈತರುತೆ ಪಾದಾವಧಾನವನ್ನೋದುತಿದೆ
ಅತ್ತ ಹೂವರಳಿರುವ ಗಿಡಮರಂಗಳ ತೂಗಿ
ಉಯ್ಯಾಲೆಯಾಡುತಿದೆ ಗಾಳಿ ಜೋಗುಳ ಹಾಡಿ.
ಬೀಸಿಬರುತಿಹುದಂತೆ ಪುಷ್ಪಪರಿಮಳಧೂಳಿ
ಸುಖದ ಸುಗ್ಗಿಯ ಬರವ ಸಾರ್ವ ಹರಿಕಾರನೆನೆ.
ಬಣ್ಣಬಣ್ಣದ ಚಿಟ್ಟೆ ನೂರೊಂದುಸಲ ಒಂದು

ನವಿಮುತ್ತನೊತ್ತುತಿವೆ ಹೂವುಹೂವಿಗೆ ಕೂತು
ಅದರಧರ ಚುಂಬನಕೆ ದಳದಳ ವಿಕಂಪಿಸುತೆ
ಸರ್ವಾರ್ಪಣಂಗೈದು ಸುಮವರಳಿ ನಿಲ್ಲುತಿವೆ
   ಗಿಡದಲ್ಲಿ ಮರದಲ್ಲಿ ಹೂವಿನಲಿ ಹಸುರಿನಲಿ
ಹಕ್ಕಿಯಿಂಚರದಲ್ಲಿ ಹಳ್ಳದಲಿ ಹೊಲದಲ್ಲ
ಜಲದಲ್ಲ ನೆಲದಲ್ಲಿ ಎಲ್ಲಿ ನೋಡಿದರಲ್ಲ
ಉಂಗುರಿಂಬಾಗಿನೊಳು ಚೆಲುವಿಂತು ಸೂಸುತಿದೆ
ಇಂಹೊತ್ತಿನಲಿ ನೋಡಲಿಂತಾಣದಿಂ ಚಲುವು
ಇಮ್ಮಡಿಸಿ ತೋರುತಿದೆ ನೆಲದ ಚಲುವಿನ ಜೊತೆಗೆ
ಬಾನ ಚೆಲುವೂಕೂಡಿ ಒಂದಾದುದೆಂಬಂತೆ
ಭೂಲೋಕದಲಿ ನೆಟ್ಟ ಪಾರಿಜಾತಂ ಅರಳಿ
ಪರದ ಸೌರಭ ಸೂಸಲಾನಂದವಿಮ್ಮಡಿಸಿ
ತೋರ್ಪಂತೆ, ದೈವಸಾನ್ನಿಧ್ಯದಲಿ ಭಕ್ತಗಣ
ಕಳಯೇರಿ ನಿಲುವಂತೆ, ಪತಿದೇವನೆದುರಿನಲಿ
ಸತಿಯಾತ್ಮ ಹೊಳೆವಂತೆ, ಅಸ್ತಗಿರಿಯಾಚೆಯಲಿ
ರತ್ನದೀಪಸ್ತಂಭದಂತೆ ರವಿ ಜಿಗುತಿರೆ,
ನೂತ್ನಶೋಭೆಯಿನೆಸೆದು ಸಂಧ್ಯೆ ಮೈದೋರುತಿರೆ,
ನೇದಿಂಪ್ಯವೆನೆ ತೋರ್ಪ ಸ್ವರ್ಗಸೌಂದರ್ಯದಲಿ
ತಿರೆ ಬೆಳಗಿ ನಿಂದಿಹುದು ಅತ್ಯಧಿಕ ಕಾಂತಿಯಲಿ
   ಈಬೆಳಕು ಈಕಾಂತಿ ಈಬೆಡಗು ಈಬಣ್ಣ
ಈಚೆಲುವಿನಾಲೋಕವೀಸೊಬಗಿನಾನಂದ
ಆವುದೋ ಹಳೆಯ ಸವಿನೆನಪುಗಳ ಕೆರಳುತಿವೆ.
ಬಗೆಯ ಬಾನಂಗಳದಿ ಸ್ಮೃತಿಯ ಪಟಲದ ಮೇಲೆ
ನೂರಾರು ಕಲ್ಪನೆಯ ದೃಶ್ಯಜ್ಯೋತಿರ್ಮಾಲೆ
ಹೃದಯಾಂತರಾಳದಿಂದೊಗೆದು ಮಿನಮಿನ ಮಿನುಗೆ
ಮೂಡಿಬರುತಿಹುದಿಂದು ಎನಗಾದಿನಂ ಸಂಜೆ
ಪ್ರಿಯತಮನ ಪ್ರಥಮ ಸಂದರ್ಶನೋತ್ಕರ್ಷದಿಂ—

ದಾದ ದಿವ್ಯಾನಂದದನುಭವದ ಸವಿಸೆಸವು.
ಇಂತಹುದೆ ಸಂಜೆಯುಲಿ ಅಂದಿದುವೆ ತೋಟದಲಿ
ಇಲ್ಲಿಗೈದಿದನಾತನೆನ್ನರಕ್ಷಾಬಂಧಿ
ರಜಪೂತಪುಂಗವನ ನಾನಂದೆ ನೋಡಿದುದು
ಜೇನೆಯ್ಯ ಪೋಲಿನಿದು ಆಗಳಾದನುಭವಂ
ಆದನು ನೆನೆದೊಡನಿಂದು ದೇಹ ಗುಡಿಗಟ್ಟುವುದು,
ಕಣ್ಣು ಹನಿಗೂಡುವುದು, ಆನಂದವುಕ್ಕುವುದು.
ಮತ್ತವನೆ ಕಣ್ಣೆದುರೆ ಬಂದಂತೆ ನಿಂದಂತೆ
ನುಡಿದಂತೆ ನಡೆದಂತೆ ಭಾಸವಾಗುವುದೆನಗೆ
ಪ್ರೇಮದಂಜನ ಬಳಿದ ಬಗೆಗಣ್ಣ ತೆರೆಯಲೆನೆ
ಕಾಣಿಸುವನೆನ್ನಿನಿಯನೆನ್ನ ರಕ್ಷಾಬಂಧಿ
ನೋಡು ನೋಡಾತನಂ ರಜಪೂತ ವೀರನಂ!
ಆರ್ಯಧರ್ಮೋದ್ಧರಣಕೆಂದು ಕೈಯೆತ್ತಿಹಂ
ದ್ರೋಹಿಯುಚ್ಚಾಟನಕ್ಕೆಂದು ಅಸಿಯಿರಿದಿಹಂ
ದೇಶ್ಯರಸನೋತ್ಕರ್ಷಕೆಂದು ಹಯವೇರಿಹಂ
ಎನ್ನಂತೆ ಆತನುಂ ಪೌರುಷ ಪ್ರಣಯಿಯೆನೆ
ಭೀಮ ಬಂಧುರ ಮಹೋನ್ನತನಾಗಿ ತೋರಿಹಂ
ಆತನಸಮಾನನತಿಸುಭಗನಸ್ವಾಕೃತಂ
ಕವಿ ಗಮಕಿ ಗಾಯಕರ್ ಹೆಂಜೇಡಿಗಳವೋಲು
ಕಾವ್ಯಗಾಯನ ಚಿತ್ರನೃತ್ಯಸಂಗೀತದಿಂ
ಮಾನಗೌರವಗಳಂ ಗಳಿಸಲೆಂದಾಶಿಸುತೆ
ಅರಸನಾಸ್ಥಾನವನ್ನರಸಿ ಬರುತಿರಲಿತ್ತ
ಅತ್ತಲೆನ್ನಿನಿಯ ತಾಂ ಕಪ್ಪುಕುದುರೆಯನೇರಿ
ಬಿಲ್ಲು ಬಾಣ ಗುರಾಣಿ ಬತ್ತಳಿಕೆಗಳ ಕೊಂಡು
ಮಾರಣದ ಯಜ್ಞದಧ್ವರ್ಯುವೆನೆ ನಡೆಯುವಂ
ರಣರಂಗವೆಡೆಗಾಗಿ. ಅವನಂಥ ವೀರರಿಂ
ಭಾರತಕೆ ಸುಖವಹುದು, ರಾಷ್ಟ್ರದುನ್ನತಿಯಹುದು.

ಏನೇನನೋ ಇಂತು ಯೋಚಿಸುತ್ತಿರುವಂದು
ಆವುದೋ ಅಸ್ಪಷ್ಟದನಿಗೇಳಿದಂತಾಗೆ
ತಿರುಗಿದೆಂ ಕಿವಿಯರಳಿ ಕೇಳಿದೆಂ, ಕಣ್ಣರಳಿ
ನೋಡಿದೆಂ. ಆಕಾಶಮಂಟಪದೊಳದೆತಾನೆ
ದೀಪಹಚ್ಚಿತು ತಾರೆ, ಬಳ್ಳಿವನೆಯಿಂದದುವೆ
ತೀಡಿದುದು ಸೌರಭಂ, ಹೊಳೆ ಹರಿದು ಜಾರಿದುದು
ಹಕ್ಕಿ ಹಾರಿತು ಹಾಡಿ ನಿನಗೆ ಶುಭಮಹುದೆಂದು.
ನವವಸಂತೋನ್ಮೇಷಶಾಲಿನಿಯಪ್ಪ ಸೃಷ್ಟಿರತಿ
ಬಹ್ವರ್ಥಗರ್ಭಿತೆಯ ದಿಟನೊಂದು ಬಗೆಯುತಿರೆ
ಅನತಿದೂರದ ನಿಕುಂಜದೆಡೆಯುತ್ತಣಿಂದದೋ
ಚಿಮ್ಮಿದುದು ಕೆಂಧೂಳಿ ಖುರಪುಟದ ದನಿಕೇಳಿ
ಚಿಮ್ಮಿದೆಂ ಏನೆಂದು ನೋಡಲೆಂದಾಶಿಸುತೆ,
ಕೈಗೆಬಂದಾಮ್ರತರುಶಾಖೆಯಂನೆಮ್ಮಿ ನಾಂ
ಕಾಣಿಸಿತು ಹಯವೇರಿದು ಧಾವಿಸುತಲೈತರುವ
ಪ್ರೇಮಮೂರ್ತಿ. ಹಿರಿಹಿರಿಹಿಗ್ಗಿ ಆತನೆ ನಿಜಂ
ಎಂದು ಸಾನಂದದಿಂ ಮೈಮರೆದು ಬೀಳುವೊಲು
ಪೊಳಕಾಲನೂರಿದೆಂ ಆತನಡಿದಾವರೆಯೊ-
ಳೆನ್ನಕುಂತಳದುಂಬಿ ನಿಶ್ಚಿಂತೆಯಿಂದಲೆನೆ
ನೆಲೆಸಿದುದು ನಿಶ್ಚಲಂ.
ಮುಂದೇನ ಪೇಳುವೆಂ!
ಮನಸಿನಲಿ ಕನಸಿಪ್ಪುದಿಲ್ಲಿ ನೆನಸಾದುದೆನೆ
ಕಪ್ಪುಕುದುರೆಯನಿಳಿದು ಬಳಿಬಂದ ಇನಿಯನಂ
ನೋಡಿ ಪುಳಕಂಗೊಂಡು ಮೈಬೆವರಿ ಮನ ಬಳಲಿ
ಹೃದಯಮುದ್ವೇಗದಲಿ ರಕ್ತ ಬಿಸಿಯಾಗುತಿರೆ,
ಅಂತರ್ವದನೆಯಾಗಿ ಬಾಗಿನಿಂತೆನು ಬರಿದೆ.
ಎನ್ನಿರವನವಲೋಕಿಸುತ್ತನಿಯನಿಂತು ಸಂ-
ತವಿಸಿದನು ಮಾತಿನಲಿ ನುಡಿನುಡಿಗೆ ಜೇನಿಟ್ಟು:

“ಓ ದೇವಿ! ಜಹನಾರಬೇಗಮಳೆ! ಬಳಿಗೆ ಬಾ,
ಕೊಳದ ಸೀಗಾರ್ದಿಗೆಯೊಳರಸಂಚೆ ಕುಳಿತಂತೆ
ಅಮೃತಶಿಲೆಯಂಚಿನಲಿ ನಿಶ್ಚಿಂತೆಯಿಂ ಕುಳಿತು
ನಿನ್ನ ಮಧುರಗಾಯನದಿನೆನ್ನೆದೆಯ ಸಂತವಿಸು
ಔರಂಗಜೇಬನಾಣತಿಯಿಂದೆ ದೇಶದಲಿ
ಗಾಯನವೆ ಇಲ್ಲವಾಗಿದೆಯಂತೆ ಆದರೇಂ!
ನಮ್ಮಿರ್ವರೀಗಾನ ಸ್ವರ್ಗಲೋಕದ ಗಾನ
ಗಂಧರ್ವಗಾನಮುನ್ನಿದನಾಗದೆನ್ನಲಿಕೆ
ಭೂಲೋಕದಾಳರಸ ಬಾದಷಹಗಳವಲ್ಲ
ಗಂಧರ್ವರಂತಾವು ಹಾಡುವುದೆ ನಮ್ಮ ಗುರಿ
ಜಹನಾರ! ನಿನ್ನಮೃತಗಾಯನದಿನೆನ್ನೆದೆಗೆ
ರಸವೂಡು! ರಣದಿಂದ ತಂದಿರುವ ವ್ರಣಮಯದ
ದೇಹವುಂ ನಿನ್ನ ಪ್ರೇಮಾಮೃತದ ಮಧುರಿಮೆಯ
ಗಾನಲಹರಿಯೊಳೊಮ್ಮೆ ಮಿಸಿಸು ಮುಳುಗಿಸಿ ನಲಿಸು.
ಮರೆವೆನಾ ನೋವುಗಳ ಮರೆವೆನಾ ಪರಿಗಳ
ಜೇನಿಂಚರಂಗೈದು ಸೊದೆಗರೆದು ದನಿಗೂಡು
ಕಾತರಿಪುದೆನ್ನ ಎದೆ, ಕಳವಳಿಪುದೆನ್ನ ಮನ,
ತಣಿಸು ಬಾ ಮುದವೂಡು”

ಬಳಿಕರೆದು ಬರಸೆಳೆದು

ಅರಸನಿಂತಾದರಿಸೆ, ಮೆಲ್ಲಮೆಲ್ಲನೆ ಸರಿದು
ಹಾಲುಗಲ್ಲಿನ ಮೇಲೆ ಕುಳಿತಾನು ಹಾಡಿದೆನು
ಗಾನದಾನಂದದಿಂ ಪರವಶತೆಯೊಂದಿದೊಲು
ಚಿನ್ಮಾನ ಮುದ್ರೆಯಲಿ ಆತ್ಮಸುಖನಿದ್ರೆಯಲಿ
ಮನವಾಣ್ಮನಿರ್ದನು ನಿರಾಳ ನಿಶ್ಚಿಂತೆಯಲಿ!
ನಾನುಮಂತಾತನವೊಲಾನಂದದಿಂ ಮುಂದೆ
ಭಾವಾನುಭವದಿಂದೆ ಭಾವಪರವಶಳಾದೆ
ಅದ್ವೈತಭಾವದಿಂದಾತ್ಮಸಮರಸಗೊಂಡು

ಶಾಶ್ವತದ ಶಿವಸುಖಂ ಕಂಡ ರಸಪೂರ್ಣರೆನೆ
ಅವಧಿಯುಗಿವಿಲ್ಲದೆಯೆ ಸುಖಿಸಿದೆವು ನಾವಂದು
ಶಾಂತಿಯುಂ ತಾಳಿ ಕಾಲನನೆ ಮೂದಲಿಸಿದಂತೆ!
  ಕರ್ತವ್ಯಭಾರದಿಂದೆನ್ನರಕ್ಷಾಬಂಧಿ
ಹೊರಡಲನುವಾಗುತಿರೆ ನುಡಿದನೆನಗಿಂತೆಂದು·
"ಯೋಧಪುರದರಸರಲಿ ಪೀಳ್ಗಿಯೊಂದುಳಿದಿರಲಿ,
ಆದರ ಶಿಶುಹೃದಯದುಸಿರಾಡುತಿರುವನ್ನೆಗಂ
ನಮ್ಮರಸು ಮನೆತನದ ಕ್ಷಾತ್ರದೀಪಸ್ತಂಭ
ಕುಸಿಯಲಾರದು ದೇವಿ, ನಂದಲಾರದು ದೀಪ!
ಇಂಗಲಾರದು ತೈಲ, ದೇದೀಪ್ಯಪ್ರಭೆಬೀರಿ
ಪ್ರಜ್ವಲಿಸಿ ಬೆಳಗುವುದು ಅಷ್ಟು ಸತ್ವೋನ್ನತಂ
ನಮ್ಮ ಕ್ಷತ್ರಿಯ ಜನ್ಮ" ಇಂತುಸುರಿ ಕಟಿಬದ್ಧ
ಕರವಾಲಮಂ ಸೆಳೆದು ಝಳಪಿಸುತೆ "ಇದೊ ನೋಡು!
ನಿನ್ನ ಮಾನ್ಯತೆಗಾಗಿ ಮತ್ತೆ ಗೌರವಕಾಗಿ
ಸುರಗಿಯೆಳೆದಿಹೆನಿಂದು, ಸಮರದಲಿ ಗೆಲುವೆಂದು
ಹೋಗಿಬರುವೆನು ನಾನು, ಕೋರು ಜಯಸಿದ್ಧಿಯಂ"
ಎಂದಾತನಾಡಿದಂ ಅವನುಸಿರು ಬಿಸಿಯಿತ್ತು,
ವೈರಕ್ತ ಕುದಿದಿತ್ತು. ಪ್ರಜ್ಞೆ ಕಾವೇರಿತ್ತು,
ನಾನು ನುಡಿವನಿತರೊಳೆ ಮತ್ತೆ ಇಂತುಸುರಿದಂ
"ಜಹನಾರ! ಕ್ಷಾತ್ರರಕ್ತವು ಹರಿವ ನಿನ್ನೆದೆಯೊ
ಳಳಿಸಿದೆಂದೆ ಮೇವಾರ ಸಾಮರನ ಸವಿನೆನಪು!
ದೆಹಲಿ ಅಜ್ಮೀರುಗಳ ರಕ್ಷಿಸುವ ಕಾರ್ಯದಲಿ,
ವಿದ್ರೋಹ ಮುಸಲರನ್ನೆದುರಿಸಲು ಹೋದಾತ
ಮೇಲಂತರಿಕ್ಷದಲಿ ಅಪ್ಸರೆಯನೊರ್ವಳಂ
ಸಂದರ್ಶನಂಗೈಯೆ ನುಡಿದಳವಳಿಂತೆಂದು:
'ಓ ಅರಸೆ! ಧರ್ಮಪ್ರಭು! ಸಮರಸಂರಂಭದಿಂ–
ದಾರ್ಯಧರ್ಮೋದ್ಧಾರಕಾರ್ಯದಲಿ ತೊಡಗಿರುವ

ನೀನಿಂದು ಧನ್ಯನೈ. ಶತ್ರುಗಳನೆದುರಿಸುತೆ,
ಧೈರ್ಯಶೌರ್ಯೋತ್ಸಾಹಗಳ ತೋರಿ ರಣದಿ ಮಡಿ.
ಚಿಂತಿಸದಿರಲ್ಲಿ ನಿನಗಿಂದ್ರನರ್ಧಾಸನಂ
ದೊರಕುವುದು ಮೇಣಿಲ್ಲಿ ಸತ್ಕೀರ್ತಿ ಲಭಿಸುವುದು,
ಇಂತುಸರಿ ಅಪ್ಸರಸೆ ವೈಗರೆಯೆ ನೃಪತಿಗಾ
ದಿವ್ಯಸಂದೇಶದಿಂದಾವೇಶವಿಮ್ಮಡಿಸೆ,
ರಣರಂಗಕ್ಕೈದಿದಂ. ಕಾದಿ ಮಡಿದಂ ಪಡೆದ-
ನಿಂದ್ರನರ್ಧಾಸನವನನಂತಮಳ ಕೀರ್ತಿಯಂ."
ಮಾತು ನಿಲ್ಲಿಸಿ ಮೌನವಂತಾಳಿದನು ಎನ್ನಿನಿಯ
ಒಳನೋಟವನು ಬೀರಿ ಮೌನದಲಿ ನುಡಿವಂತೆ
ನೋಡುತಿದ್ದನು ಎನ್ನ ನಾನುಮಂತವನನ್ನೆ
ನೋಡುತಿದ್ದೆನು ಅಂದೊಬ್ಬರೊಬ್ಬರನಿಂತು
ನೋಡಿದೆವು ಬಹುಹೊತ್ತು. ಬಳಿಕ ಮೌನವನುಳಿದು
ಎನ್ನೆದೆಯ ಇಂಗಿತವನಿಂತಾಡಿದೆನು ನಾನು:
"ಯೋಧಪುರಮೋ ಅರಸೆ! ಎನ್ನ ರಕ್ಷಾಬಂಧಿ!
ಕೇಳು ನನ್ನೀಮಾತ, ಆ ಕನೂಜಿನರಾಣಿ
ಸಂಯೋಗಿನೀದೇವಿ-ಹೆಸರ ಕೇಳಿಹೆ ಬಲ್ಲೆ-
ತನ್ನ ಪತಿ ಕಾಳಗಕೆ ಹೊರಟಿರಲು, ಬೀಳ್ಕೊಳುವ
ಸಂಭ್ರಮದೊಳಾಕೆ ಹೇಳಿದ ಮಾತು ನೆನಸಿದೆಯ?
'ಕಾಳಗದೊಳರಿಯೊಡನೆ ಹೋರಾಡಿ ಮಡಿದಂದು
ನಿನಗಾಗಿ ಕಾದಿಹುದು ಸ್ವರ್ಗ ಪರಲೋಕದಲಿ!
ಅಲ್ಲದಿರೆ ಯುದ್ಧದಲಿ ಶತ್ರುವನೆ ಚೆಂಡಾಡಿ
ವಿಜಯಮಾಲಿಕೆ ಧರಿಸಿ ಪುರಕೆ ಹಿಂದಿರುಗುವರೆ,
ನಿನಗಾಗಿ ಕಾದಿಹೆನು ಸ್ವರ್ಗನಿಭ ಧಾಮದಲಿ.
ಅಡಿಯ ಮುಂದಿಡು ನುಗ್ಗು ಅಡಿಗಶ್ವಮೇಧ ಫಲ
ಅರಿಯ ಮುಂಗಡೆ ನುಗ್ಗು ಮತ್ತಶ್ವಮೇಧ ಫಲ.
ಅಸಿಯ ಹಿರಿದರಿಯನಿರಿ ಮತ್ತಮರಲೋಕ ಫಲ.

ನನ್ನವರಿದಿಹವ ತೋರಿ ದೇವೇಂದ್ರಸಿರಿಯಹುದು.
ನಿನ್ನ ತಾಯಿಯ ನೆನೆದು, ಜನ್ಮಭೂಮಿಯ ನೆನದು,
ರಾಷ್ಟ್ರದೇಳಿಗೆಗಾಗಿ, ದೇಶದುನ್ನತಿಗಾಗಿ,
ಸತ್ಯಪ್ರೂಂಪನೆ ನಾನು ಉದ್ಧರಿಸುವೆಂ ಎಂದು,
ಧರ್ಮಪ್ರೂಂದನೆ ನಾನು ಉದ್ಧರಿಸುವೆಂ ಎಂದು,
ಸ್ವಾತಂತ್ರ್ಯ ನಮಗೆಂದು ನಡೆಮುಂದೆ ಯುದ್ಧಕೆ’
ಇಂತೆಂದು ನುಡಿದು ಸತಿ ಬೀಳ್ಕೊಂಡಳಿನಿಯನಂ
ಕಸ್ಪರಿಯ ಮಾತಲ್ಲ, ಅಶರೀರವಾಕ್ಕಲ್ಲ,
ಮೇಲಂತರಿಕ್ಷದಲಿ ತೋರಿ ಮೈಗರೆದವಳ
ನುಡಿಯಲ್ಲಿ, ವೀರ ಭಾರತಮಾತೆಯುದರದಲಿ
ಪುಟ್ಟಿ ಹೆಸರಾದೊಬ್ಬ ವೀರಕ್ಷತ್ರಿಯರಮಣಿ,
ಯುದ್ಧವಾರ್ತೆಯ ಕೇಳಿ ಪ್ರಿಯನಬಿ ಮನಸ್ಸಬಿ
ಆವೇಶ ಬಂದಂತೆ ಕ್ಷೋಭಗೊಂಡವಳಂತೆ
ಪತಿದೇವನಂ ಕುರಿತು ಘುರವೀಳ್ಯವನಿತ್ತು
ನುಡಿದಮಾತಿದು ಇನಿಯ!” ಹೇಳಹೇಳುತೆ ನಾನೆ
ತಾಳುತಾವೇಶಮಂ ಮತ್ತೆಂದೆನಾಕ್ಷತ್ರ
ರಮಣಿಯ ಚರಿತ್ರೆಯಂ ಆ ರುದ್ರವೀಣೆಯಂ
ಮಿಡಿಯುತಾಲಾಪಿಸಿದೆನಾ ವೀರಗಾನಮಂ
“ಯುದ್ಧದಲಿ ಪತಿ ಮಡಿಯೆ ಸಂಯೋಗಿನೀದೇವಿ
ಯೋಗಿನೀಪುರದಲ್ಲಿ ಚಿತೆಯನಣಿಮಾಡಿದಳು
ಅರಮನೆಯ ಮುಂಗಡೆಯೆ ನೆರೆದೆಲ್ಲಮಂದಿಯಂ
ಸಂಬೋಧನಂಗೈದಳಿಂತೆಂದು : ‘ಆತ್ಮಬಲಿ-
ದಾನದಿಂ ರಕ್ತತರ್ಪಣಮಿತ್ತು ಋಣಮುಕ್ತ
ನಾದನೆನೆ ಪತಿ ಮಡಿದು ಸೇರಿದನು ಸ್ವರ್ಗವಂ.
ಪತಿಯನುಳಿದನ್ಯತ್ರ ಗತಿಯಿಲ್ಲ ಸತಿಗೆಂದು
ಆವನೆಡೆಗೆ ಪೋಗುವೆಂ, ನಶ್ವರದ ದೇಹವಂ
ಅಗ್ನಿಗಾಹುತಿಮಾಡಿ.’ ಚಿತೆಯನೇರಿದಳಾಕೆ.

ಮರುಗಿದುದು ಮಂದಿ ಕಣ್ಣೀರ್ ಮಿಡಿದು. ಪತಿಯೆಡೆಗೆ
ತೆರಳಿದಳು ಆತಾಯಿ ಜಗದಕಣ್ಮರೆಯಾಗಿ"

ಕಥೆಹೇಳಿ, ಅರೆಚಣಂ ನಿರ್ನಿಮೇಷಾಕ್ಷಿಯಿಂ–
ದೀಕ್ಷಿಸುತೆ ಪತಿದೇವನಂ, ಕೇಳಿದೆನು ಇಂತು :
"ಇಲ್ಲಿ ಈಲೋಕದಲಿ ಒಲಿದೆರಡು ಜೀವಿಗಳು
ಅಲ್ಲ ಆ ಲೋಕದಲು ಒಂದೆಡೆಗೆ ಸೇರುವರೆ?"
ನನ್ನ ಇಹಪರದೆಲ್ಲ ಕನಸುನನಸುಗಳೆಲ್ಲ
ಈಯೊಂದು ಪ್ರಶ್ನೆಯಲಿ ಘನಿಸಿ ಹರಳಾದಂತೆ
ಕೇಳಿದೆನು ಇನಿಯನಂ. ಆತನುತ್ತರವಾಗಿ
ನಗೆಮುಗುಳನರಳಿಸುತೆ ಅಹುದೆಂದು ಹೇಳಿದಂ.
"ದೇಹಬಂಧನದಲ್ಲಿ ಸೆರೆಸಿಲುಕಿದೀಆತ್ಮ
ಅಗ್ನಿಸಂಸ್ಕಾರದಿಂ ಕೊಳೆನುಚ್ಚು ಕಳೆಯೇರಿ
ಮಿರುಗುವುದು ಕಾಳಿಕೆಯು ಕಳದುಳಿದ ಮಿಸುನಿಯಂತೆ"

ಎಂದು ಹಯವೇರಿದಂ, ನಾನು ಹೌಹಾರಿದೆಂ
ಮತ್ತೆನೋಡುವೆನೆಂದು ಆಶ್ವಾಸನಂಗೈದು
ಎವೆಮುಚ್ಚಿ ಬಿಡುವಲ್ಲಿ ಮಿಂಚಿನುರೆಯಾದಂ
ಒಡನೆ ತಿರೆಗುರುಳಿದೆಂ, ಸಂಚಿತಪುಣ್ಯಕರ್ಮಂ
ಸಂದುದೆನೆ ಸ್ವರ್ಗದಿಂ ತಿರೆಗುರುಳ್ವ ಸುಮನಸೆಯು
ಪೋಲಂತೆ, ಧಳಧಳನೆ ಹೊಳೆದು ಹೊಗುರುರಿದಂಥ
ಪುಣ್ಯದೀವಿಗೆಯಾರಿ ಉಳಿದ ಕಿಡಿ ಮಸಿಯಾಗಿ
ಕರಕಲಿಳೆಗುರುಳ್ವಂತೆ, ತುರಗಖುರಪುಟಹತಿಯು
ಧೂಳಿಯೊಳಗುರುಳಿದೆಂ ಬೆಚ್ಚಿಬೆಚ್ಚನೆ ಸುಯ್ದು

ಬಳಿಕಲೆಂತೋ ಮುಂದೆ ಮೂರ್ಛೆತಿಳಿದೆಳ್ಚರುತೆ
ನಾನೆ ನನ್ನಂ ಸಂತವಿಸಿ ಚಿಂತಿಸಿದೆನಿಂತು :
ಮಧ್ರರಾಜನ ಮಗಳು, ಸತ್ಯವಾನನ ಮಡದಿ,
ಸಾವಿತ್ರಿ, ತನ್ನಾತ್ಮಸತ್ವದಿಂದಂತಕನ
ಮೆಚ್ಚಿಸಿ ವರಂಪಡೆದು, ಪ್ರಾಣೇಶನಾಯುವಂ

ಪಡೆದಂತೆ, ನಾನುಮೆನ್ನಾತ್ಮಸತ್ತ್ವೋನ್ನತಿಯ
ಪ್ರೌಮೆಯಿಂ ತಡೆಹರಿದಸಂತತೆಯೊಳೊಂದಾಗಿ
ಆಣ್ಮನೊಡಗೂಡುವೆಂ ಎವಂಬ ಸಂಕಲ್ಪ
ಬುದ್ಧಿಯುಂದೆಚ್ಚತ್ತು, ಶೋಕಹರ್ಷೋದ್ವಿಗ್ನ-
ಮನೆಯಾಗಿ, ಮರಳಿದೆ ಗೃಹಾಭಿಮುಖಗಮನೆಯಾಗಿ

# ಗತಿ ೨

ವಿದ್ರೋಹಿಗಳ ಘೋರಸಂಗ್ರಾಮಸಮಯದಲಿ
ಸಿಕ್ರಿಯಲಿ ನಾನಿದ್ದೆ ಗ್ರೀಷ್ಮಋತುಸಮಯವದು
ಭೂಗೋಳವಂ ಬಳಸಿ ಸೂರ್ಯದೇವಂ ತನ್ನ
ಪ್ರಖರಕಿರಣಂಗಳಿಂ ಸೃಷ್ಟಿಚೈತನ್ಯಮಂ
ಸುಡುವನೆನೆ ತೋರಿದಂ ಚಂಡಭೈರವನಂತೆ!
ಆತನುರಿಗಣ್ಣಂತೆ, ದಿಗ್ದಿಗಂತದೊಳಾಚೆ
ಕಾಳ್ಕಿಚ್ಚಿನುರಿ ಹೊತ್ತಿ ಗಿಡಮರಂಗಳನೆಲ್ಲ
ನಿರ್ನೆರಂ ದಹಿಸಿತ್ತು! ನಿರ್ಝರಣಿ ಬತ್ತಿತ್ತು,
ಧರಣಿ ನೀರಡಸಿತ್ತು. ಬೀಸಿ ಬಿಸಿಬಿಸಿಯಾಗಿ
ತಿರುಗಿ ಸುಟ್ಟುರಿಯಾಗಿ ಕೆಂಧೂಳಿಯಂ ಕವಿಸಿ
ವಿಲಯರುದ್ರಾವತಾರನ ನೃತ್ಯದಾರ್ಭಟದ-
ಪೋಲಂತೆ ಉನ್ಮತ್ತವಾಗಿತ್ತು ಮಾರುತಂ!
ಅಗ್ನಿಯುಂ ಸೂರ್ಯನುಂ ಲಯಕಾರ್ಯಕರ್ತರೆನೆ
ತಮ್ಮ ತೇಜಃಪಿಂಡದುರಿಯಿಂದೆ ಲೋಕಮಂ
ಸುಡುವಂದು ಪ್ರಾಣಿಸರ್ವಸ್ವಮುಂ ಬೆದಬೆದನೆ
ಬೆಂದು ಮೃಗತೃಷ್ಣಿಕೆಗೆ ಮರುಳಾಗುತಿತ್ತಂದು!
ನರರೂಪಿ ಮೃಗರೂಪಿ ಖಗರೂಪಿ ಕ್ರಿಮಿರೂಪಿ
ಅಣುರೇಣುತೃಣರೂಪಿ ತರುಗುಲ್ಮಲತೆರೂಪಿ
ಸರ್ವಚೈತನ್ಯಮುಂ ಸರ್ವಜೀವತ್ವಮುಂ
ಬಿಸಿಲ ಬವಣೆಗೆ ಬಳಲಿ ಮೂರ್ಛೆವೋದಂತಿತ್ತು!

ಸಿಕ್ರಿಯರಮನೆಯಲ್ಲಿ ರೋಸಿ ಬಿಸಿಲುರಿಸೆಕೆಗೆ,
ಆಸತ್ತು ಮಲಗಿರಲ್ ಕನಸಾದುದೆನಗೊಂದು:

ದೆಹಲಿಯರಮನೆಯಲ್ಲಿ ಪುರುಷಸಿಂಹಂ ಬಂದು
ಕತ್ತನೊಲಿದಾಡಿಸುತೆ, ಗಂಭೀರಗತಿಯಿಂದ-
ಲಡಿಯಿಡುತೆ ಮುಂಬರಿದು, ಗತಿಗೊಪ್ಪುವಂದದಲಿ
ಒಮ್ಮೊಮ್ಮೆ ಘರ್ಜಿಸುತೆ, ದೇಹಮಂ ತೂಗಿಸುತೆ,
ಲಾಂಗೂಲಮನೆತ್ತಿ ಧ್ವಜದವೊಲಾಡಿಸುತೆ,
ಕೆಂಡದಂತುರಿವ ಕಣ್ಣಾಲಿಗಳ ತಿರುಗಿಸುತೆ,
ಕೇಸರಂಗಳ ಕೆದರಿ, ಮೈಕೊಡಹಿ ಮುಂಬರಿದು,
ಒಂದೆ ನೆಗೆತಂ ನೆಗೆದು, ಶತ್ರುಹನನಂಗೈದು,
ಮಾಯವಾಯಿತು ಸಿಂಹ! ದೂರ ಗಿರಿಗಹ್ವರ-
ದ್ವಾರದಿಂ ಮೊಳಗಿದುದು ಆರ್ಭಟಂ ಎದೆಬಿರಿಯುವಂತೆ!
ಒಡನೆ ಕಂಡನು ಕಣ್ಗೆ ಉರಿವ ಮರಳಿನ ಕಾಡು,
ಬಿಸಿಲ್ಗೆ ಬತ್ತಿದ ಕಡಲ್ ಮೈದೆಗೆದು ನಿಂದಂತೆ
ಕಣ್ಗೆಸೆಯುವಾಪೀತ ಸೈಕತಸ್ತೋಮಪಥ-
ರಾಜರಾಣಿಯರಂತೆ ಸಿಂಹಸಿಂಹಿಣಿ ಜೋಡಿ
ಕಣ್ಗೆಸೆದುದೆನಗಲ್ಲಿ ಶತ್ರುಹನನಂಗೈದ
ಸಿಂಹ ಸಿಂಹಿಣಿಯೊಂದ ಕೂಡಿತ್ತು ಬಂದಲ್ಲಿ
ಸೈಕತಪ್ರಾಂಗಣದೊಳೆಲ್ಲಿಯುಂ ನೋಡೆ
ನೆರಳಿಲ್ಲ, ನೀರಿಲ್ಲ, ಆಗರೊಂದು ಕುರುಹಿಲ್ಲ
ಕಣ್ಗೆತ್ತಲು ಮರಳು, ಕಿವಿಗೆ ಮರಳಿನ ಗಾಳಿ,
ದೂರ ಬಹುದೂರದಲಿ ಮಸುಕು ತಳೆದಿಹ ಬಾನು,
ಕೆಳಗೆ ಒಂದೇ ಒಂದು ಖರ್ಜೂರ ಮರನಿಹುದು,
ಅದರ ತುದಿಯಾದರೂ ಮುಗಿಲ ಸಮಕೇರಿಹುದು,
ಅವುಗಳಿಗೆ ಕಣ್ಣೆದುರ ಜಗವೆ ಇಷ್ಟದೊಳಿತ್ತು
ಆದರುಂ ಎನಿತೊಂದು ಶಾಂತಿಯಲಿ ಸುಖಿಸಿದುವು!
ಕಾಶ್ಮೀರದಲಿ ಬೆಟ್ಟ ಬೆಟ್ಟದಟ್ಟಿಗೆ ಕೂಡಿ
ಮಲಗುವವೊಲಾಸಿಂಹ ಸಿಂಹಿಣಿಯು ಕೂಡಿತ್ತು:
ಕನಸು ತಿಳಿದೆಚ್ಚತ್ತು ಕಣ್ತೆರೆದು ನೋಡಿದೆಂ.

ಭಾವಿಸಿದೆನಾರುದ್ರ ರಮಣೀಯ ಸ್ವಪ್ನಮಂ!
ಕನಸಿನರ್ಥವನರಿಯೆ ನುವೆಪ್ಪರವರೆಂದು
ಮನದಳಲಸಾರಿಸಲು ಉದ್ಯಾನದೆಡೆಗಾಗಿ
ನಾನೊರ್ವಳೇ ನಡೆದೆ, ಕಾಹಿನವರನ್ನುಳಿದು
ಎಲ್ಲಿ ಹೋಗುವುದೆನುವ ಗೊತ್ತುಗುರಿಯಿಲ್ಲದೆಯೆ
ತಿರುಗಿದೆನು ತೋಟದಲಿ ಮನಬಂದಕಡೆಗತ್ತ
ನೆಲ ಕಾಯ್ದು ತಣಿದಿತ್ತು, ನೀರ್ಕುದಿದು ಆರಿತ್ತು,
ಗಿಡ ಸೊರಗಿ ನಿಂದಿತ್ತು, ಹೂ ಬಾಡಿ ಬಿದ್ದಿತ್ತು,
ಬಿಸಿಗಾಳಿಯುರಿಯಾರಿ ಭಾರವಾಗುತಲಿತ್ತು
ದುಗುಡದಾಗರದಿಂದ ಶೋಕಸಾಗರದೆಡೆಗೆ
ಕ್ಷೀಣಾಂಗಿ ತೊರೆಯೊಂದು ತೆರೆ ಬತ್ತಿ ಹರಿದಿತ್ತು
ಅದರೆಡೆಗೆ ಮೊಗಬಾಗಿ ಬೊಗಸೆಯಿಂ ನೀರೆತ್ತಿ
ಹಣೆಯ ಬೆಮರ್ವನಿಗಳಂ ಅಳಿಸಿದೆಂ. ಕಣ್ಣುಮುಖ
ಕೈಕಾಲ್ಗಳಂ ತೊಳೆದು ದೇಹತಾಪಂ ಕಳದು
ಮೂಡಿದ ಮನಸ್ತಾಪಮುಂ ತೊಳೆವುದಿನ್ನೆಂತೊ
ಎಂದು ಯೋಚಿಸುತೆ ಕೈ ಊರಿ ಕುಳಿತೆನಲ್ಲಿಯೆ
ಅಪರ ಮರಳಂಚಿನಲಿ.
                    ಹೆಣ್ಣಾಗಿ ಹುಟ್ಟುವುದೆ
ತಪ್ಪೆಂದು ಹೋಯೆಂದು ಸುಯ್ದು ನಾಂ ಮರಳಿನುರಿ–
ಗಾಡಿನಲಿ ಹೊರೆಹೊತ್ತ ಸಂಕಟದೊಳೇದುತೆ-
ದುತೆ ಒಂಟಿ ನೀಳ್ಗೊರಲ ನೀಳ್ದನಿಯೊಳೊರಲ್ವಂತೆ!
ಏಸಿದೇನೆಂದೊಡನೆ ಎನ್ನಗೃಮೆಗೆ ನಾನೆ
ನಾಣ್ಚಿದೆಂ ಮತ್ತೆ ಮರುಗಿದೆಂ, ಚಿಂತಿಸಿದೆನಿಂತು:
ಹೆಣ್ಣೊಲವಿನಮರತೆಯನುಪಭೋಗಿಸಲ್ ಬಂದು,
ಆವಕಾಸೆ ಕನಸುಗಳ ಗರಿಗಟ್ಟಿಸಲ್ ನಿಂದು,
ಬಳಿಕ ಕಣ್ಮರೆಯಾಗಿ, ಬೇಗುದಿಗೆ ಸಿಲುಕಿಸಿರೆ,
ಪುರುಷಜನ್ಮಿಯ ಕ್ಷಣಿಕ ಸುಖಸಾರದಾಹುತಿವು–

ಲಿವಳಿಲ್ಲಿ ಬೇಯುತಿರೆ ಹೆಣ್ಣಾಗಿ, ಆನೋವ-
ನಾರಿಸುವುದೆಂತೆಂದು ಬಲ್ಲನೆ ಪುರುಷಜನ್ಮಿ!
'ಬಲ್ಲನಹುದೆಂದು' ಬಲ್ಲುಲಿಯೊಂದು ಮೊಳಗಿದುದು!
ಭಯಚಕಿತೆಯಾಗಿ ಬೆರ್ಚುಣ್ಮೆ ನೆತ್ತರ್‌ಕುದಿದು
ಪೌಹಾರಿದೆಂ, ಮರೆಯೊಳಾರಿರ್ದಪರೋ ಎಂದು
"ನಿರ್ಭರಂ ನೀನೇಕೆ ಬೆಚ್ಚುತಿಹೆ" ಎಂದೊಡನೆ
ನುಡಿಯುತಂ ದಿವ್ಯತೇಜೋಮೂರ್ತಿ ಪ್ರತ್ಯಕ್ಷ
ಮಾದಂತೆ ಬಳಿಯು ಬಂದೆನ್ನ ರಕ್ಷಾಬಂಧಿ
ನಿಂತುದು, ಹಿಂದೊಮ್ಮೆ ಕನಸುಕಂಡವಳಾನು
'ನಡೆದುದೇನಿದು ನಿಜವೊ ಸ್ವಪ್ನವೊ' ಎಂಬ
ಭ್ರಾಂತಿಯಾಳದೊಳಿಟ್ಟು ಮುಳುಗುತಿರೆ "ಜಹನಾರ,
ನಿನ್ನೊಡಲಿನುರಿಯರಿತೆ ಬಂದೆನಾಂ ರಣದಿಂದೆ"
ಎಂದಾತನಾಡಿದಂ ಮುಖದ ತೆರೆಸರಿಯಲಿದು
ಇನಿಯನ ಮುಖಂ ನೋಡಿ ನಾಚುತರಘಳಿಗೆಯೊಳ್
ಅವಗುಂಠನವನೆಳೆದು ಅಂತರ್ವದನೆಯಾಗಿ
ಆರ್ತಿಯಿಂ ವಿನಯಪೂರ್ವಕ ನಮಸ್ಕಾರದಿಂ
ಸ್ವಾಗತಿಸುತಿನಿಯನಂ ಕರೆತಂದನೆಲೆವನೆಯ
ಪಳಲ್ಪಾಣದೆಡೆಗೆಂದು

ಅತ ವಿಶ್ರಮಿಸುತಿರೆ
ಪ್ರೀತಿಯಿಂದಾತಂಗೆ ನಾಂ ಕಂಡ ಸ್ವಪ್ನಮಂ
ಪೇಳುತೆ ಸವಿಸ್ತರಂ, ಅದರರ್ಥವೇನೆಂದು
ಬೆಸಗೊಂಡೆನಾತನಂ ಸೊಂಟದಿಂದೊರೆಸಹಿತ
ಕಿತ್ತುಕರವಾಲಮಂ ಒಡನೆ ಒರ್ತಡಿಗಿಟ್ಟು,
ಕುದಿಗೊಂಡು ಪೌರುಷೋನ್ಮಾದದಿಂದಾಡಿದಂ,
ನಿಂತ ನಿಲುವಂ ತಿಪ್ಪಿ ಕಣ್ಣಾಲಿಗಳ ಬೆಳಗಿ
"ವಿಜಯ ಸೂಚಕಮಹುದು ನಿನ್ನ ಸುಂದರಕನಸು
ಶತ್ರುಹನನೋತ್ಕರ್ಷದದ್ಭುತ ಪವಾಡಮಿದು

ಭಾವಿಸಿದೆನಾರುದ್ರ ರಮಣೀಯ ಸ್ವಪ್ನಮಂ!
ಕನಸಿನರ್ಥವನರಿಯೆ ನಾವೆಷ್ಟುರವರೆಂದು
ಮನದಳಲನಾರಿಸಲು ಉದ್ಯಾನದೆಡೆಗಾಗಿ
ನಾನೊರ್ವಳೇ ನಡೆದೆ, ಕಾಹಿನವರನ್ನುಳಿದು
ಎಲ್ಲಿ ಹೋಗುವುದೆನುವ ಗೊತ್ತುಗುರಿಯಿಲ್ಲದೆಯೆ
ತಿರುಗಿದೆನು ತೋಟದಲಿ ಮನಬಂದಕಡೆಗತ್ತ

ನೆಲ ಕಾಯ್ದು ತಣಿದಿತ್ತು, ನೀರ್ಕುದಿದು ಆರಿತ್ತು,
ಗಿಡ ಸೊರಗಿ ನಿಂದಿತ್ತು, ಹೂ ಬಾಡಿ ಬಿದ್ದಿತ್ತು,
ಬಿಸಿಗಾಳಿಯುರಿಯಾರಿ ಭಾರವಾಗುತಲಿತ್ತು
ದುಗುಡದಾಗರದಿಂದ ಶೋಕಸಾಗರದೆಡೆಗೆ
ಕ್ಷೀಣಾಂಗಿ ತೊರೆಯೊಂದು ತೆರೆ ಒತ್ತಿ ಹರಿದಿತ್ತು
ಅದರೆಡೆಗೆ ಮೊಗಬಾಗಿ ಬೊಗಸೆಯಿಂ ನೀರೆತ್ತಿ
ಪಣೆಯ ಬೆಮರ್ವನಿಗಳಂ ಅಳಿಸಿದೆಂ ಕಣ್ಣುಮುಖ
ಕೈಕಾಲ್ಗಳಂ ತೊಳೆದು ದೇಹತಾಪಂ ಕಳೆದು
ಮೂಡಿದ ಮನಸ್ತಾಪಮಂ ತೊಳೆವುದಿನ್ನೆಂತೊ
ಎಂದು ಯೋಚಿಸುತೆ ಕೈ ಊರಿ ಕುಳಿತೆನಲ್ಲಿಯೆ
ಅಪರ ಮರಳಂಚಿನಲಿ
ಹೆಣ್ಣಾಗಿ ಹುಟ್ಟುವುದೆ
ತಪ್ಪೆಂದು ಹೋಯೆಂದು ಸುಯ್ದು ನಾಂ ಮರಳಿನುರಿ-
ಗಾಡಿನಲಿ ಹೊರೆಹೊತ್ತು ಸಂಕಟಮೊಳೇಮುತೇ
ದುತೆ ಒಂಟಿ ನೀಳ್ಗೊರಲ ಸೀಳ್ದನಿಯೊಳೊರಲ್ವಂತೆ!
ಏನಿದೇನೆಂದೊಡನೆ ಎನ್ನಗೃಹಮೆಗೆ ನಾನೆ
ನಾಣ್ಚಿದೆಂ ಮತ್ತೆ ಮರುಗಿದೆಂ, ಚಿಂತಿಸಿದೆನಿಂತು:
ಹೆಣ್ಣೊಲವಿನಮರತೆಯನುಪಭೋಗಿಸಲ್ ಬಂದು,
ಅವಕಾಸೆ ಕನಸುಗಳ ಗರಿಗಟ್ಟಿಸಲ್ ನಿಂದು,
ಬಳಿಕ ಕಣ್ಮರೆಯಾಗಿ, ಬೇಗುದಿಗೆ ಸಿಲುಕಿಸಿರೆ,
ಪುರುಷಜನ್ಮಿಯ ಕ್ಷಣಿಕ ಸುಖಸಾರದಾಹುತಿವ್ರೊ—

ಲಿವಳಿಲ್ಲಿ ಬೇಯುತಿರೆ ಹೆಣ್ಣಾಗಿ. ಆನೋವ-
ನಾರಿಸುವುದೆಂತೆಂದು ಬಲ್ಲನೆ ಪುರುಷಜನ್ಮಿ!
'ಬಲ್ಲನಹುದೆಂದು' ಬಲ್ಲಿಯೊಂದು ಮೊಳಗಿದುದು!
ಭಯಚಕಿತೆಯಾಗಿ ಬೆವರ್ಗಣ್ಮೆ ನೆತ್ತರ್ಕುದಿದು
ಹೌಹಾರಿದೆಂ, ಮರೆಯೊಳಾರಿರ್ದರೋ ಎಂದು
"ನಿನೆರ್ರಂ ನೀನೇಕೆ ಬೆಚ್ಚುತಿಹೆ" ಎಂದೊಡನೆ
ನುಡಿಯುತಂ ದಿವ್ಯತೇಜೋಮೂರ್ತಿ ಪ್ರತ್ಯಕ್ಷ
ಮಾದಂತೆ ಬಳಿಗೆ ಬಂದೆನ್ನ ರಕ್ಷಾಬಂಧಿ
ನಿಂತಂದು, ಹಿಂದೊಮ್ಮೆ ಕನಸುಕಂಡವಳಾನು
'ನಡೆದುದೇನಿದು ನಿಜಮೊ ಸ್ವಪ್ನಮೊ' ಎಂಬ
ಭ್ರಾಂತಿಯಾಳದೊಳಿಳ್ದು ಮುಳುಗುತಿರೆ "ಜಹನಾರ,
ನಿನ್ನೊಡಲಿನುರಿಯರಿತೆ ಬಂದೆನಾಂ ರಣದಿಂದೆ"
ಎಂದಾತನಾಡಿದಂ ಮುಖದ ತೆರೆನುರಿಸಿದು
ಇನಿಯನ ಮುಖಂ ನೋಡಿ ನಾಚುತರಘಳಿಗೆಯೊಳ್
ಅವಗುಂಠನವನೆಳೆದು ಅಂತರ್ಮನೆಯಾಗಿ
ಆರ್ತಿಯಿಂ ವಿನಯಪೂರ್ವಕ ನಮಸ್ಕಾರದಿಂ
ಸ್ವಾಗತಿಸುತಿನಿಯನಂ ಕರತಂದನೆಲೆಮನೆಯ
ಪ್ರಳಲ್ಪಾಣಡೆಡೆಗೆಂದು
ಆತ ವಿಶ್ರಮಿಸುತಿರೆ
ಪ್ರೀತಿಯಿಂದಾತಂಗೆ ನಾಂ ಕಂಡ ಸ್ವಪ್ನಮಂ
ಪೇಳುತೆ ಸವಿಸ್ತರಂ, ಅದರರ್ಥಮೇನೆಂದು
ಬೆಸಗೊಂಡೆನಾತನಂ ಸೊಂಟದಿಂದೊರೆಸಹಿತ
ಕಿತ್ತುಕರವಾಲಮಂ ಒಡನೆ ಒರ್ತಡಿಗಿಟ್ಟು,
ಕುದಿಗೊಂಡು ಪೌರುಷೋನ್ಮಾದದಿಂದಾಡಿದಂ,
ನಿಂತ ನಿಲುವಂ ತಿಪ್ಪಿ ಕಣ್ಣಾಲಿಗಳ ಬೆಳಗಿ.
"ವಿಜಯ ಸೂಚಕಮಹುದು ನಿನ್ನ ಸುಂದರಕನಸು
ಶತ್ರುಹನನೋತ್ಕರ್ಷದದ್ಭುತ ಪವಾಡಮಿದು

ಎನ್ನಿಂದೆ ನಡೆವುದೆಂಬಾದೇಶವಿಹುದಿಲ್ಲಿ,
ಈವರೆಗೆ ಕಾಳೆಗದೊಳೆಲ್ಲಿಯುಂ ಸೋಲಿಲ್ಲ
ಕೇಳೆಂದು, ಪೆಮ್ಮೆಯುಬ್ಬಿ ಬಿತ್ತರಿಸಿ ಪೇಳಿದಂ
ನಡೆದೆರಡುಪಡೆಗಳಾ ರುದ್ರಸಂಗ್ರಾಮಮಂ
ಆಕಥೆಯ ಕೇಳುತ್ತ ಹರ್ಷಪುಳಕಿತೆಯಾಗಿ
ನುಡಿದನಾನಿಂತೆಂದು "ಕಾದುವರ ಪಡೆಯೊಡನೆ
ನಾನುಮಾರಣದಲ್ಲಿ ನಿನಗೆ ನೆರವೀಯುತ್ತೆ,
ಶತ್ರುವನ್ನೆದುರಿಸಿರೆ, ಕ್ಷಾತ್ರವನ್ನುಕ್ಕಿಸಿರೆ,
ಆಗ ನಿನಗಿಮ್ಮಡಿಯ ಜಯವಾಗುತಿರ್ಕಲ್ತೆ!
ಅಕ್ರೂರನನೆದುರಿಸಿದ ಚಾಂದಬೀಬಿಯ ತೆರದಿ,
ನಮ್ಮ ಓರಹೆಸರಾದ ಸೂರ್ಯಹಾಸಳ ತೆರದಿ,
ನಾನುಮುದ್ಯುತಮಾಗಿ ರಣದಲ್ಲಿ ಕಾದುವೆಂ
ನಿನಗಾಗಿ, ನಿನ್ನೊಡನೆ, ಜಯಸಿರಿಯ ಪಡೆಯುವೆಂ
ಅಂತಃಪುರದೊಳಗಿರುವ ತೆರೆಮರೆಯ ಜೀವನಕ
ಬಲಿಯಾಗಲೊಲ್ಲದೆಯೆ, ಎನ್ನಮನವೆಳಸುತಿದೆ
ಇರ್ಬಾಯಖಡ್ಗಮಂ ತುಡುಕಿ ಘೋರಮುಖಕೋಡಿ
ಯೋಧನಿವಹದ ನಡುವೆ ಉಸಿರೆಳೆಯಬೇಕೆಂದು
ಕೊಲೆಗೆ ಹೇಸುವೆನೆಂದು ಬೆದರುವೆಯ ವೀರವರ!"
"ಓವೆಂ ರುದ್ರಾಂಬೆ! ಅರಿತೆ ನಿನ್ನಾತ್ಮವಂ
ಅರಿಯೆಯಾ ನೀನುಮೆನ್ನಾತ್ಮಮಂ? ನಿನ್ನಸಿರೆ
ಎನ್ನಾತ್ಮ, ದನಿಯೆ ಜಯಭೇರಿ, ಒಲುಮೆಯೀ ಹರಕೆ
ನೀನ ಬಾಳಿನ ಗಂಗೆ! ನೀನೆ ಪ್ರೇಮದ ತುಂಗೆ!
ಆವರಿವರ ಕಥೆಹೇಳಲವರಿಂವಲೇನು ಫಲ!
ತತ್ವವೇನಿದ್ದರೂ ಸತ್ವವೇ ಹಿರಿದಂತೆ.
ಆ ಆತ್ಮಸತ್ವದಿಂದೀಮಾತನಾಡುತಿಹೆ:
ಹೆಣ್ಣಿನೊಲುಮೆಯೆ ನಮಗೆ ಸರ್ವಪ್ರಾಣಾಧಾರ!
ಆ ಒಲುಮೆಯೇ ಜಗದಿ ಪರಮಶಾಶ್ವತ ಶಕ್ತಿ.

ಅದೆ ವಾಣಿಯಾವೇಶ, ಅದೆ ಗೌರಿಯಾವೇಶ,
ಲಕ್ಷ್ಮೀಕಟಾಕ್ಷವದು, ಅದೆ ಜಗದ್ಧಾತ್ರಿಕೃಪೆ,
ಮೋಹದುವೆ ತ್ರೈಲೋಕ್ಯಭೂಭುವನವಾನಂದ
ಅದು ಜಗದ್ಧರಣ ಪೋಷಣ ಶಕ್ತಿ, ಅದುವೆ ಜಗ
ದಾದಿಕಾರಣ ಶಕ್ತಿ, ಸೃಷ್ಟಿಪ್ರೇರಕ ಶಕ್ತಿ
ಆಶಕ್ತಿಯುಳಿದಂದು ವಿಶ್ವವೇ ಲಯವೆಂದು
ಹೇಳುವರನಾದಿಯಿಂದಾಗ್ರರುಮನಾರ್ಯರುಂ
ಹೃದಯದೀರಸ್ಥಳದೊಳಾರಾಧ್ಯಶಕ್ತಿಯದು
ಆ ಶಕ್ತಿಯೆಂದರಿತು ನಿನ್ನನಾಂ ಪೂಜಿಸುವೆ
ಓ ದೇವಿ ಜಹನಾರ! ನಿನ್ನ ಸಾನಿಧ್ಯವಿರೆ
ಚಿನ್ನವಾಗುವುದೆನ್ನ ಬಾಳುವೆಯ ಹುಡಿ ಮಣ್ಣು
ಶಾಂತಿ ರಸದೊದವುಗಳೆನಗಿಲ್ಲ ದೊರೆಯುವುವು
ಪ್ರೇಮಸ್ಫೂರ್ತಿಗಳಿಕೆ ಕಾರುಣ್ಯ ಸೌಹಾರ್ದ
ಲಭಿಸುವುವು ಈ ನಿನ್ನ ಸಾನ್ನಿಧ್ಯದಲಿ ನನಗೆ
ಕಾಶಿರಾಮೇಶ್ವರಗಳೆನಗಿಲ್ಲಿ ಸಂಧಿಸಿವೆ
ಇಹಪರಗಳಾಲಿಂಗನದೊಳಿಲ್ಲಿ ವಿರಮಿಸಿವೆ
ನನಗಿದೆ ಪವಿತ್ರತಮ ಪ್ರೇಮಯಾತ್ರಾ ತೀರ್ಥ
ಈ ತೀರ್ಥವಿಂಗಿದರೆ, ಈ ಗಂಗೆ ಬತ್ತಿದರೆ,
ನನಗೆನ್ನ ಯತ್ನದಲಿ ಜಯಸಿದ್ಧಿಯಾಗುವುದೆ?
ನಿನ್ನ ಪ್ರೇರಣೆಯೊಂದೆ, ನಿನ್ನೊಲುಮೆಕುರುಹೊಂದೆ,
ನನ್ನೊಡನೆ ಬರಲಿಂದು ರಣದೆಡೆಗೆ ನೀನಿಲ್ಲಿ
ನಿಶ್ಚಿಂತೆಯಿಂ ನೆಲಸಿರೌ ನಿನ್ನ ಗುರುತಾಗಿ,
ನಿನ್ನ ತುಟಿ ಮುದ್ದಿಡುವ ಮುಖದ ತೆರೆಯುಂಸೆಯಲಿ
ಒಂದೆಳೆಯನೆಳೆದೆನ್ನ ಕೈಗೆ ಕಂಕಣಕಟ್ಟು,
ನಿನ್ನ ಅವಗುಂಠನದ ಸುಂದರ ಶ್ರೀಮಂತ
ವಸ್ತ್ರಾಂಚಲದ ಹರಿದ್ವರ್ಣಶೋಭೆಯೊಳೆಸೆವ
ಕಂಕಣಂ ನನ್ನ ತೋಳ್ ಸಿಂಗರಿಸಿ ಮೆರೆದಿರಲಿ,

ಯುದ್ಧಭೂಮಿಯೊಳೆನೆಗೆ ರಕ್ಷೆಯಾಗಿರುತಿರಲಿ
ನಾನಿಂದು ನಿಜವಾಗಿ ನಿನ್ನ ರಕ್ಷಾಬಂಧಿ
ಬೆನ್ನಿಗೆ ಗುರಾಣಿ, ಎದೆಗೆ ಕವಚಂ, ಕೈಗೆ ಅಸಿ,
ಶೀರ್ಷಿಕೆ ತಲೆಗೆ, ಕಂಕಣಂ ತೋಳ್ಗೆ, ಇವನುಳಿದು
ಬೇರೆ ಕಾಪಿನ್ನೇಕೆ? ಬೇರೆ ಕ್ಷೇಮಗಳೇಕೆ?
ಆಪರಿಂದ ಓವಾವಿ! ಜಹಸಾರ ಬೇಗಮಳೆ!
ತಡಮಾಡದೆಯು ಕಟ್ಟು ಇದೊ ಕೈಗೆ ಕಂಕಣವ-
ನೆಂದು ಕೈನೀಡಿದಂ ಆಜ್ಞಾವಿಧೇಯನನೆ
ಮೂಕಹೃದಯಾವೇಶದುದ್ವೇಗಭರದಿಂದೆ,
ಕೈನೀಡುವನಿತರೊಳ್, ವಸ್ತ್ರಾಂಚಲಂ ಹರಿದು
ಸಿಂಗರಿಸಿದೆಂ ಕಂಕಣವನವನ ಬಲಗೈಗೆ.
    ಸೀಳಿಮನಭೋಂಗಣದೊಳದೆ ಚುಕ್ಕಿ ಹೊಳೆದಿತ್ತು,
ಹೃದಯಾಂತರಾಳದೊಳಗಾಸೆಕಿಡಿ ಹೊಳೆವಂತೆ
ಕೊಳದಕನ್ನೈದಿಲೆಗಳರಳೆ ನೀರ್ಗನ್ನಡಿಯೂ-
ಳಸೆದು ಮಿನುಗಿದುವಿಲ್ಲಿ ಆಸೆಯಾಮಿಷದಂತೆ.
ಮೂಡಿದಂ ತಂಗದಿರನಾಡಿದುದು ತಂಗಾಳಿ,
ತುಂಬಿಪುದು ತಂಪಿನ ಕಂಪಿನಿಂಪಿಳೆಯ ಮೇಲೆ
ಹಕ್ಕಿ ಹಾರಿತು ಹಾಡಿ ವಿಜಯಪ್ರೇಮದಲೀಲೆ
ಸಿದ್ಧಿಸುವುವಹುದೆಂದು ಶುಭಶಕುನಮುಂ ನುಡಿದು
ಎದೆಗುದಿಯನಾರಿಸುತ ಬವರಬವಣೆಯು ಕಳೆದು
ನಾವಿರ್ವರುಂ ಅಂದು ಮರಳಿದೆವು ಅರಮನೆಗೆ.
ತೆರೆಯ ತೋಯಿಸಿ ನಿಂದ ಬೆಳದಿಂಗಳಂ ಮಿಂದು

## ಗತಿ ೪

ದಿನನಾಥನಂ ಪೊತ್ತ ಅರುಣನ ರಥಂಬಂದು,
ಭೂಗೋಳಮಂ ಬಳಸಿ ಮೂವತ್ತು ಸೂಳ್ವರಂ
ತಿರುಗಿದುದು, ತಾಂ ನಿಷ್ಠೆಯಿಂ ಕಾಲಕಾಲಕ್ಕೆ
ಎಣಿಸುತಿರ್ದೆಂ, ದಿನಂ ಮೂರುಪತ್ತಾದುದಂ
ಮೂರು ಯುಗವಾದಂತೆ ಮರುದಿನಂ ಬಂದಿನನ
ರಥವಂತೆ ಬಂದಿನಿಯನಂ ನೋಡಿ, ಉಷೆಯಂತೆ
ಹರ್ಷಪ್ರಕಟಿತೆಯಾದೆ ಮೂಡಿದನುರಾಗದಿಂ
ಯುದ್ಧಕಥೆಗಳ ಕೇಳಿ ಮತ್ತೆ ಸ್ಥೈಯುಬ್ಬಿದೆಂ
ಪ್ರೇಮಕಥೆಗಳ ಕೇಳುತಂತೆ ಮನವುಬ್ಬಿದೆಂ
ಕ್ಷಣದಂತೆ ಕಳೆದತ್ತು ಎನಗಾ ದಿನಂ ಪಗಲ್
ಬಾನಹೊಡೆಯಿಂದಿಳಿದು ಇನನಸ್ತಗಿರಿಯೇರಿ
ಹೊಂಗ್ರಿಗಳಂ ಮುಗಿದು ಪ್ರಾರ್ಥನೆಯ ಸಮಯಮಂ
ಸಾರುತಿಹನಿಳೆಗೆಂಬುದಂ ನೆನೆದು ನಾನುಮಂ-
ತಾತನುಂ ಮೌನದಿಂ ತಲೆವಾಗಿ ಪ್ರಾರ್ಥಿಸಿದೆ-
ವೀಶನಂ, ಧರ್ಮಮಂ ಬೆಳಗೆನ್ನೊಳನಿಶಮೆಂದು
ಬಳಿಕ ರಕ್ಷಾಬಂಧಿ ಕುಳಿತೆನಗೆ ತತ್ವಮಂ
ಬೋಧಿಸುತೆ, ಇಹಪರದ ಶ್ರೇಯಮಂ ಪ್ರೇಯಮಂ
ಸಾಧಿಸುವ ರಸ ಋಷಿಯ ಮಾರ್ಗಮಂ ಪೇಳುತಿರೆ,
ಧ್ಯಾನದಿಂ ಕೇಳಿದೆನದಂ ತಪಸ್ವಿನಿಯಂತೆ
ಪ್ರೇಮದಾರಾಧನೆಗೆ ಅಣಿಗೈವ ಭಕ್ತೆಯಂತೆ.
ಶುಕ್ರವಾರದ ಪೌರ್ಣಿಮಾ ರಜನಿ ಬಂದಂದು
ಇಳೆಯನಾಳುವ ದಿವಸ! ಚಂದ್ರಿಕೆಯ ಕಿರಣಗಳ

ಚುಂಬನೋತ್ಕರ್ಷದಿಂ ಯಮುನೆಯಾನಂದದಿಂ
ಉಕ್ಕೇರಿ ಹರಿವದಿನ! ಸುಮದಸೌರಭ ಹೊತ್ತು
ಗೌರವದ ಭಾರದಿಂ ಗಂಧವಾಹಂ ಬಂದು
ಮಂದಮಂದಂ ಬೀಸಿ ಕಂಪೂಡಿ ಸುಳಿವ ದಿನ!
ತಾಜಮಹಲಾದಿನಂ ಗೌರಾಂಗಮಂ ತಾಳ್ದು
ಅಮೃತಲೋಕದಿನಿಳಿವ ತಾಯಿಯಂ ಸ್ವಾಗತಿಸಿ
ನಲಿವ ದಿನ! ಅದರಿಂದಲಂದು ನಾವಿರ್ವರುಂ
ಸಾತ್ವಿಕಪ್ರೇಮದೌಪಾಸನೆಗೆ ತಾಯಡೆಗೆ
ತಾಜಮಹಲಿಗೆ ಎಂದು ತೆರಳಿದೆವು ಭಕ್ತಿಯಿಂದೆ
ತಾಜಮಹಲೊಳಗಂದು ನೆರೆದ ಮೌಲ್ವಿಗಳಿದ್ದ,
ಮಂತ್ರಪಾಠವನುಳಿದು, ನಮ್ಮನಿದಿರ್ಗೊಂಡೊಯ್ದು
ಕರೆತಂದರಮ್ಮನ ಸಮಾಧಿಯಿರುವೆಡೆಗಾಗಿ
ಮುತ್ತುರತ್ನಗಳಿಂದ ಚಿತ್ರಕರ್ಮಂಗೈದ
ಬಣ್ಣಬಣ್ಣದ ಬಹಿರ್ವಾಸದಿಂ ಸಿಂಗರಿಸಿ,
ಸುಂದರ ಸಮಾಧಿಯಂ ಧೂಪದೀಪಂಗಳಿಂ
ಪುಷ್ಪಪತ್ರಂಗಳಿಂ ಫಲಗಳಿಂ ಪೂಜಿಸುತೆ,
ಸ್ವಸ್ತ್ಯಯನಮಂ ನುಡಿದು, ದಿವ್ಯಗೀತಂಗಳಂ
ಪಠಿಸಿ, ವಿಧ್ಯುಕ್ತ ಕರ್ಮಂಗಳಂಗೈದೆಮಗೆ
ಶುಭಮಕ್ಕೆಂದು ಆಶೀರ್ವದಿಸಿ ತೆರಳಿದರು.
ಬಳಿಕ ನಾವಿರ್ವರುಂ ಅಲ್ಲಿ ಮೊಳಕಾಲೂರಿ
ತಾಯ್ಗೆ ಬಿನ್ನಪಗೈದು ಸಲಿಸಿ ಸಂಪ್ರಾರ್ಥನೆಯ,
ಕೈಮುಗಿದು ನಿಂತಿರಲ್ ನುಡಿದೆ ನಾನಿಂತೆಂದು:
"ಎನ್ನ ಪ್ರೀತಿಯ ಚಿನ್ನ! ಎನ್ನ ಕನಸಿನ ರನ್ನ!
ನಿನ್ನ ಮನಸಿನೊಳಿರುವ, ನಿನ್ನೆಡೆಗೆ ಪ್ರಿಯವಾದ,
ತಾಜಮಹಲಿಗೆ ಮಿಗಿಲ ಪಡಿನುಡಿಯ ಕೊಡುವಂಥ,
ಸಕ್ಕರೆಯ ಅಕ್ಕರೆಯ ನುಡಿಯೊಂದನಾಡುವೆಯ!
ತಾಯ ಸನ್ನಿಧಿಯಲ್ಲಿ ಪ್ರೇಮದಾಗರವಲ್ಲಿ

ಮೃದು ಮಧುರ ಪ್ರೇಮಮಂತ್ರೋಪದೇಶವನಿತ್ತು
ನನ್ನೆದೆಯ ಸಂತವಿಪ ಪೀಯೂಷವೂಡುವೆಯ!"
ಕಣ್ಣು ನಾಲಗೆ ಮೂಗು ಚರ್ಮಂಗಳೆಲ್ಲವುಂ
ಕರ್ಣಂಗಳಾದುವೆನೆ ಕೇಳಲಾಶಿಸಿ ನಿಂದೆ
ಪೇಳ್ವನಾವುದನೆಂದು, ಕೇಳ್ವೆನಾನೇನೆಂದು!
ಆತ ಬಾಯ್ತೆರೆದು, ತುಟಿಯಲುಗಿ ದನಿ ಹೊಮ್ಮುವುದೆ
ತಡಂ, ಎದೆ ಕಿವಿಗೆ ಬಂದಂತೆ ಕಾತರದಿಂದೆ
ನಿಂದೆನಾಲಿಸುತೆ ಶಬ್ದೇಂದ್ರಿಯಂಗಳ ತೆರೆದು.
ಸೃಷ್ಟಿಕರ್ತನ ಮಹಿಮೆಯಂ ಕಂಡು, ಆ ದಿವ್ಯ
ಲೀಲಾವಿನೋದಂಗಳಂ ನೋಡಿ, ಮೈಯುಬ್ಬಿ
ಭಾವಪರವಶನಾಗಿ, ಬಳಿಯೆ ಪ್ರಾಂಜಲಿಬದ್ಧ
ನನೆ ನಿಂದ ಶಿಷ್ಯಂಗೆ ಪ್ರೇಮದಿಂ ತತ್ತ್ವೋಪ-
ದೇಶಮಂ ಮಾಡುವ ಮಹಾಜ್ಞಾನಿ ರಸಋಷಿಯ-
ವೋಲಂತೆ ದನಿಗೂಡಿಯಾಡಿದಂ ಇನಿಯನಿಂತು:
"ಓ ಎನ್ನ ಮನದನ್ನೆ! ಜಹನಾರಬೇಗಮಳೆ!
ಕೇಳು ನನ್ನೀನುಡಿಯನಿದು ಸನಾತನ ಸತ್ಯ
ಪ್ರೇಮವೇ ಜಗದಲ್ಲಿ ಪರಮ ಶಾಶ್ವತ ತತ್ತ್ವ.
ಪ್ರೇಮಬಂಧಿತರಾವು ಅಜಿವಡದೊಳಗಿಂತೆ
ಪ್ರೇಮದಿಂ ಕೂಡುವೆವು. ಇದು ನಿಶ್ಚಯಂ ನಂಬು
ನಾವಿಕರವೋಲಾವು ಆತ್ಮಶಕ್ತಿಯ ನೆಮ್ಮಿ,
ನಮ್ಮ ಸತ್ತ್ವೋನ್ನತಿಯೆ ನಮ್ಮ ಕಾವುದು ಎಂದು.
ನಮ್ಮ ಧರ್ಮೋನ್ನತಿಯೆ ನಮ್ಮನುಳುಹುವುದೆಂದು,
ಪ್ರೇಮರತ್ನಪ್ರಭೆಯ ಹೊಳೆವ ಮುಂಬೆಳಕಿನಲಿ
ಧೈರ್ಯಸಾಹಸಗಳಿಂ ಭವವನುತ್ತರಿಸುತಿರೆ;
ನಡುವೆ ಭಂಗಂ ಬಂದು ತೆರೆ ಮಸಗಿ ಹಡಗೊಡೆದು
ಕೂಡಿ ಹೊರಟವರಾವು ಅಗಲಿ ಬೇರಾದರುಂ
ಒಂದೆ ಗುರಿಯಾದುದರಿನಲ್ಲಿ ಎಂತಾವರುಂ

ಮತ್ತೆ ಸೇರಲೆಬೇಕು; ಯಾತ್ರೆ ಮುಗಿಯಲೆಬೇಕು.
ಎನ್ನ ಪಯಣಂ ಮುಗಿದು ನಾ ಮುಂದೆ ಹೋದಂದು
ಕಾಯುವೆಂ ನಿನಗಾಗಿ, ನನಗಿಂತ ಮುನ್ನವೇ
ನೀನಲ್ಲಿಗೈದುವರೆ ಕಾಯುತಿರು ನನಗಾಗಿ.
ಇದೆ ಪ್ರೇಮ ಮಂತ್ರಂ ಪಠಿಸು ದೇವಿ! ಜಹನಾರ!
ಕಾಯುವುದೆ ನಮ್ಮ ತಪ, ಸಂದರ್ಶನವೆ ಸಿದ್ಧಿ".
ಮಾತು, ಅಲೆಅಲೆಯಾಗಿ ಒಡನೆ ಮಾರ್ದನಿಗೊಂಡು,
ಶತಶತಸಹಸ್ರ ಸುರನರ್ತಕಿಯರೊಗ್ಗೊರಲ
ಸಂಗೀತಮೇಳದೊಲು ಮೊಳಗಿದುದು ಸೌಧದಲಿ.
ದಿವ್ಯಪುರುಷಂಗೈದ ಪ್ರೇಮೋಪದೇಶದಿಂ
ಮಂತ್ರಮುಗ್ಧೋನ್ಮತ್ತ ನಾಗನವೊಲೆನ್ನ ಮನ
ಹೆಡೆಯರಳಿ ನಿಂದುದಾಮೋದದಿಂ ವಿವಶವಾಗಿ
ಘಳಿಗೆಯಾವೇಶದಲಿ ಮರ್ತ್ಯದಿಂದಮರತೆಗೆ
ಆತ್ಮತೇಜೋಬಲದ ಗುಪ್ತಶಕ್ತಿಯನೇರಿ
ಅನ್ಯತರಸಭೋಗದಲಿ ಇಹಪರಂಗಳ ಮರೆತು
ನಿತ್ಯತೆಯ ತಬ್ಬಿದೆಂ ರಸಲಹರಿಯೊಳಗದ್ದಿ!

ತಾಜಮಹಲಂ ಬಿಟ್ಟು ಮನೆಗೆ ಮರಳುವ ವೇಳೆ
ಇನಿಯನಿಂತಾಡಿದಂ: "ನಾನು ಹೊರಡುವೆ ನಾಳೆ.
ಇಲ್ಲಿ ನಿನ್ನನು ತಿರುಗಿ ನೋಡಲೆನಗಾಗದಿರೆ
ಚಿಂತಿಸದಿರದಕಾಗಿ; ಮತ್ತೆ ನೋಡುವೆನಲ್ಲ"
ಮೌನದಿಂದಡಿಯಿಟ್ಟೆ ಸುಯ್ಯು ನಿಟ್ಟುಸಿರಿಟ್ಟು
ಇರುಳ ಹಕ್ಕಿಯದೊಂದು ಕಿರ್ರೆಂದು ಚೀರಿತ್ತು!
ಮೇಲೆ ಆಕಾಶದಲಿ ಮುಳುಗಲನುವಾಗಿದ್ದ
ಚಂದ್ರನಂ ಮುಸುಕಿ ಆವರಿಸಿತ್ತು ಮೋಡವೊಂದು!

## ಗತಿ ೫

ನನ್ನ ಬಾಲ್ಯದ ಸಣ್ಣ ನೆನಪೊಂದು ಸುಳಿಯುತಿದೆ:
ನಾವು, ದಾರ ಮುರಾದ ಷೂಜ ಔರಂಗ್ಸೇಬ-
ರೆಲ್ಲರುಂ, ಎಳಮೆಯಲಿ ಅರಮನೆಯ ತೊಟ್ಟಿಯಲಿ
ಆಟವಾಡಲು ನೆರೆದು, ಸಂಭ್ರಮದೊಳೊಂದಾಗಿ
ಮರದ ಕೀಲ್ಗೊಂಬೆಗಳ, ಕಾಲಾಳು ಸೈನಿಕರ,
ರಥ ತುರಗ ಹಸ್ತಿಗಳ, ಅವುಗಳಾರೋಹಕರ,
ಎದುರುಬದುರಾಗಿಟ್ಟು ಕೀಲ್ಗೊಟ್ಟು ತಿರುಗಿಸಿರೆ,
ಆನೆಯಾನೆಯ ಬಡಿದು, ಕುದುರೆ ಕುದುರೆಯ ತಾಗಿ,
ಆಳಿಗಾಳಿದುರಾಗಿ, ಹೊಯ್‌ಕೈಯೊಳೊಂದಾಗಿ
ಕಾದುವುದ ಕಂಡೊಡನೆ ಎನಿತು ಹಿಗ್ಗಿದೆವೆಂದು!
ಆಟದಲಿ ಕಂಡ ಯುದ್ಧವ ನೋಡಿ ನಲಿದಾನು
ನಿಜದ ಯುದ್ಧಕ್ಕಿಂದು ಬೇಸತ್ತು ಮರುಗುತಿಹೆ!
ಮೋಣಂದಿನಾಟದಲಿ ನನ್ನಕಡೆ ಜಯವೆಂದು,
ನಿನ್ನಕಡೆ ಸೋಲೆಂದು, ಒಬ್ಬರೊಬ್ಬರ ಕುರಿತು
ಮೂದಲಿಸಿಯಾಡಿದೆವು. ಕಾಲ್ಮುರಿದು, ಕೈಮುರಿದು,
ಕೀಲ್ನಿಂತು, ಗೊಂಬೆ ಮುಂದೋಡದಿರೆ ಬೆದರಿದೆವು.
ಅಯ್ಯೊ ಸೋತೆವು ಎಂದು ಅಳುತಳುತಲೋಡಿದೆವು.
ಅಮ್ಮನಲಿ ಹೇಳಿದೆವು ನಮ್ಮಾಟದಪಜಯವ.
ಅಣ್ಣ ಕೆಡಿಸಿದನೆಂದು, ತಮ್ಮನಳಿಸಿದನೆಂದು
ಏನೇನನೋ ದೂರಿ ಅಳುತಿದ್ದ ಕಂದರನು
ತಾಯಿ ತೊಡೆಯೊಳಗಿಟ್ಟು 'ಕಂದರಿರ ಅಳಬೇಡಿ.
ನೀವು ಆಡುವ ಯುದ್ಧ ಮರದಗೊಂಬೆಯ ಯುದ್ಧ,

ಸೋಲಾದರೂ ಆಟ ಗೆಲುವಾದರೂ ಆಟ
ಆಟವನು ಮರೆತಿಂತು ಆಳುತ ಬರುವುದೆ ನೀವು'
ಎಂದೆಮ್ಮ ಸಂತವಿಸಿ ಕಳುಹುತಿಷ್ಟಳು ತಾಯಿ.
ಅಂದು ಚಿಕ್ಕವರೆಂದು ಅಮ್ಮ ಹೇಳಿರಲಿಲ್ಲ
ಇಂದು ದೊಡ್ಡವಳಾಗಿ ಅದನರಿತುಕೊಂಡಿಹೆನು
ನಾವೆಲ್ಲ ದೇವದೇವನ ಕೈಯ ಗೊಂಬೆಗಳು.
ಆವನಿಟ್ಟ ಗತಿಯಲ್ಲಿ, ಆವನೆಳೆದ ಗೆರೆಯಲ್ಲಿ,
ನಡೆಯುವೆವು, ನಿಲ್ಲುವೆವು, ಕಾದುವೆವು, ಹೋರುವೆವು,
ಕೆಳಗುರುಳಿ ಬೀಳುವೆವು, ಮೇಲೆದ್ದು ಆಳುವೆವು
ಆವನ ಲೀಲೆಯೊಳಿಂತು ನಟವರ್ಗ ನಾವಾಗಿ
ನಾಟ್ಯದಭಿಲಾಷೆಯಲಿ ನೈಮನಂ ಮರೆತುಬಿಡೆ
ಸೋಲುಗೆಲುವುಗಳಿಲ್ಲ ಏಳುಬೀಳುಗಳಿಲ್ಲ.
ನಿರ್ಲಿಪ್ತಜೀವನದ ಪರಮಸುಖಧಾಮದಲಿ
ನಿಸ್ವಾರ್ಥಜೀವನದ ಲೀಲಾವಿನೋದದಲಿ
ಪೂರ್ಣನಾಗುವನಾತ್ಮ ರಸಮಯಂ ತಾನಾಗಿ!

ತಂದೆ ಮಡಿದಿಹನೆಂದು ಸುದ್ದಿ ಬಂದಿತು ನನಗೆ.
ಸಂತಸದ ಸುದ್ದಿಯಿದು! ತನಗಾಗಿ ಕಾದಿದ್ದ
ಪ್ರೇಯಸಿಯ ಬಳಿಗೈದಿ ಕಾಂತಾಸಮಾಗಮದಿ
ಆತ ಸುಖಿಸುವನಲ್ಲಿ. ಆವನ ದೇಹವನಿಲ್ಲ
ಒಪ್ಪಮಾಡಿಟ್ಟಿಹರು ಆ ಶ್ವೇತಸೌಧದಲಿ.
ಷಾಜಹಾನಾ ಸೆಲೀಮರಿಗೆಂದು ದಿನದಿನಂ
ದೀಪಹಚ್ಚುವರಿಲ್ಲಿ ಧೂಪ ಉರಿಸುವರಿಲ್ಲಿ
ಚಂದ್ರನುಂ ಸೂರ್ಯನುಂ ಹೊಳೆದು ಬೆಳಗುವರಿಲ್ಲಿ

ದಾರನುಮನಾಯೆಡೆಯ ಹೂಳಿರುವರಾಳದಲಿ
ಮೋಣಂತೆ ಮಡಿದೆಲ್ಲ ಬಂಧುಭಗಿನಿಯರಲ್ಲಿ
ಪವಡಿಸಿಹರಾತ್ಮಸುಖನಿದ್ರೆಯ ನಿರಾಳದಲಿ.
ನನ್ನೊಡಲ ಕಟ್ಟಾಣಿ, ನನ್ನೊಲುಮೆ ಕಣ್ಣಮಣಿ,

ಭಾರತೀಯರ ಬಂಧು, ನನ್ನ ರಕ್ಷಾಬಂಧಿ
ಜನ್ಮಭೂಮಿಗೆ ತನ್ನ ರಕ್ತತರ್ಪಣವಿತ್ತು,
ಇಂದ್ರಲೋಕಂ ಸಾರ್ದು ಕಂಕಣವಿಸರ್ಜನೆಗೆ
ಕೈನೀಡಿ ಕಾದಿಹಂ ನನಗಾಗಿ!

'ನಾನುವಾ

ಕಾಲನ ನಿರೀಕ್ಷೆಯಲಿ ದಿನವೆಣಿಸುತಿಹೆನಿಲ್ಲಿ,
ಏಕಾಂಗಿಯಾಗಿ ಸಂಗಡಿಗರಾರಿಲ್ಲವೆನೆ
ಕಳೆದ ಕಾಲದ ಕಥೆಯನಿನ್ನೇಕೆ ತೆರೆಯುವುದು!
ಹಳೆಯ ಹಾಡಿನ ನುಡಿಯನಿನ್ನೇಕೆ ನುಡಿಸುವುದು!
ಎಲ್ಲ ವ್ಯರ್ಥಗಳ ಕಥೆಯ ನುಡಿದಿನ್ನು ಫಲವೇನು!
ನೆನಪಿಗವು ಬರದಿರಲಿ ಮರವಿನೊಳಗಡಗಿರಲಿ,
ವಿಸ್ಮೃತಿಯ ಕಡಲಾಳದೊಳಗೆಲ್ಲ ಮುಳುಗಿರಲಿ
ಉಂಡ ಬಳಿಕಿನ್ನೆಮಗೆ ಏಕೆ ದೀಪದ ಚಿಂತೆ
ಆರಿರುವುದಾರಿರಲಿ ಮತ್ತೆ ಹೊತ್ತಿಸದಿರಲಿ
ತೈಲವಿಂಗಿದ ಮೇಲೆ ಆರುವುವು ಕೆಲದೀಪ.
ಬತ್ತಿ ಕಳಚಿದ ಮೇಲೆ ಆರುವುವು ಹಲಕೆಲವು
ಹಣತೆಯೊಡೆದೆಣ್ಣೆ ಸುರಿದಾರುವುವು ಹಲಕೆಲವು
ಇನ್ನು ಕೆಲವಾರುವುವು ಬಿರುಗಾಳಿ ಬೀಸಿದರೆ
ಮತ್ತೆ ಕೆಲದೀಪಗಳು ಚಿಟ್ಟೆಗಾಹುತಿಯಾಗಿ
ನಂದುವುವು ಬಣ್ಣಬಣ್ಣದ ಚಿಟ್ಟೆ ದೀಪವನೆ
ಹಣ್ಣೆಂದು ಬಳಿಸಾರಿ ಕುಣಿದಾಡಿ ಮುದ್ದಾಡಿ
ಮೈಸುಟ್ಟು ಮನಸುಟ್ಟು ಸುಡುವದೀಪಕೆ ಬಿದ್ದು
ಸಾಯುವುದು, ದೀಪವೂ ನಂದುವುದು. ಇದಕಾಗಿ
ಮರುಗುವುದು ನನ್ನನ್ನರೊಲವಲ್ಲ ತರವಲ್ಲ.

ಮಧುಮಾಸದುದಯದಲಿ ರಜಪೂತರಾಣಿಯರು,
ಊರಹತ್ತಿರ ಹರಿವ ಹೊಳೆಯ ಬಳಿಯೊಳು ಸೇರಿ,
ದೀಪೋತ್ಸವಂ ನಡೆಸಿ, ಮಧುಪೂಜೆಯಂ ಮಾಡಿ,

ಎಲೆಯ ದೊನ್ನೆಗಳೊಳಗೆ ಉರಿವ ಸೊಡರನ್ನಿಟ್ಟು,
ತೇಲಿಬಿಡುವರು ಹರಿವ ಹೊಳೆಯ ನೀರಿನ ಮೇಲೆ
ಗಾಳಿ ನೂಕಿದ ಕಡೆಗೆ, ನೀರು ಹರಿಯುವ ಕಡೆಗೆ,
ಅಲೆಯೆದ್ದು ಬಿದ್ದಂತೆ ಕುಣಿಕುಣಿದು ಮುಂದೋಡಿ,
ತೇಲುವುದು ಹಣತೆ, ಉರಿಯುವುದು ದೀಪ, ಹಿರಿಹಿರಿ
ಹಿಗ್ಗುತಾನಂದದಿಂ ರಜಪೂತರಾಣಿಯರು
ಮರಳುವರು ನಲಿದಾಡಿ ಹಬ್ಬದೊಸಗೆಯ ಹಾಡಿ
ಕಾಲನಾಹಿನಿಯಲ್ಲಿ ನಾನಿಂದು ಅವರಂತೆ
ದೀಪೋತ್ಸವಂಗೈದು ನಾದದೀಸೊಡರನ್ನು
ನನ್ನಾತ್ಮದೀ ದೀಪದಾರತಿಯನಿದನಿಂದು
ತೇಲಿಬಿಡುವೆನು ಮುಂದೆ ನನ್ನ ರಕ್ತಾನುಬಂಧಿ-
ಯಾತ್ಮಸಂದರ್ಶನಕೆ ನಲಿಯುತಿದು ಸಾಗಲೆಂದು

ಮಣ್ಣಡಿಯ ದೇಹವಂ ಮುತ್ತುರತ್ನದಿ ಹೊದಿಸಿ
ಸುಂದರಸ್ತೂಪವಂ ಸಿಂಗರಿಸಿ ನಿಲ್ಲಿಸುವ
ಪ್ರೀತಿಯಾರಾಧನೆಯ ತತ್ವವಂ ಅರಿಯದೆಯೆ,
ಲೋಭರತರಾದ ಜನ, ಸ್ತೂಪವಂ ಪಾಳ್ಗೆಯ್ದು
ಸೂರೆಗೊಳ್ಳುವರದರ ಮುತ್ತುರತ್ನಂಗಳಂ
ಆದುದರಿನೆನಗಂಥ ವೈಭವಂಗಳ ಬೇಡ
ಹಸುರು ಹುಲ್ಲಿನ ಹೊದಿಕೆ ನನಗೆ ಮರೆಯಾಗಿರಲಿ
ಲೋಭದಿಂದಲ್ಲದಿರೆ ದ್ವೇಷದಿಂದಾದರುಂ
ಯಾರೆನಿತು ಸಾಹಸದಿನದನೆಳೆದು ಕಿತ್ತರುಂ,
ಮೊದಲಿಗಿಮ್ಮಡಿಯಾಗಿ ಬೆಳೆದು ಹಚ್ಚಗೆ ಕೂಡಿ,
ಮುಚ್ಚುವುದು ಗೋರಿಯಂ ಸುಮನಸರ ಶಾಂತಿಯಿಂ,

ಷಾಜಹಾನ, ಸಲೀಮ, ದಾರ, ರಕ್ತಾನುಬಂಧಿ
ನಾಲ್ವರಿವರು, ನನಗ ಈಯೊಂದು ಅರಿವಿತ್ತು
ನನ್ನನಾನರಿವಂತೆ ನನ್ನಾತ್ಮವಂ ಬೆಳಗಿ
ಅವಿನಾಶಿ ಚೈತನ್ಯ ತತ್ವಮದನೆಂದರುಹಿ

ಅದೆ ಸತ್ಯಮಾನಂದ, ಅದೆ ಶಿವಂ ಅದ್ವೈತ,
ಅದೆ ಹೃದ್ಯಸುಂದರಂ, ಅದೆ ಜಗದ್ವ್ಯಾಪಿ ರಸ-
ಮದೆಪೂರ್ಣಮದೆ ಭೌಮಮದೆ ಬೃಹತ್ ಎಂಬುದಂ
ಪೇಳ್ವಂತೆ ಅವನರಿವ ಪ್ರಾಜ್ಞೆಯಂ, ಆ ದಿವ್ಯ
ಕಾಣ್ಕೆಯಂ, ಎನಗಿತ್ತು ಸಂದರವರೆಲ್ಲರುಂ.
ನಾನಿಂದು ಸೃಷ್ಟಿಯಲಿ ಏಕಾಂಗಿಯಾಗಿರುವೆ
ಲೋಕಾಂತದೆಡೆಸೇರಲೇಕಾಂತಕೆಳಸುತಿಹೆ.
ಅದರಿಂದಲೆನ್ನಾತ್ಮ ಕಥೆಯ ಮುಗಿಸುವ ಮುನ್ನ
ಮಂಗಳವ ಶ್ಲೋಕಮೊಂದೀನುಡಿಯು ಹಾಡುವೆಂ.
'ತನ್ನರಿವೆ ತನಗೆ ಗುರು ತನಗೆ ತಾನೇ ರಕ್ಷೆ
ತನ್ನ ಮರೆವುದೆ ಬಂಧ ತನ್ನನರಿವುದೆ ಮೋಕ್ಷ
ತನ್ನಾತ್ಮಬಲದಿಂದೆ ತನ್ನ ಇಹಪರಸೌಖ್ಯ
ತಾನೆ ಸಾಧಿಸಬೇಕು ತನ್ನಮರಪದವಿಯಂ
ತಾನೆ ಭೋಗಿಸಬೇಕು ತನ್ನಮೃತದನ್ನಮಂ'
ಇಂತು ಮಂಗಳ ಹಾಡಿ ಮೊಗಲರಾಜಕುಮಾರಿ
ಮೌನದಿಂ ಧ್ಯಾನಿಸುತೆ, ಆತ್ಮನಂ ಸಾಧಿಸುತೆ,
ಶುಭ್ರತೇಜೋಮೂರ್ತಿ ಬೆಳಗಿದಳನಂತಮಂ
ಧವಳ ದೀಧಿತಿಯಾಗಿ, ಗಂಗೆಯುಂ ಬಿಟ್ಟೈದಿ
ಮಾನಸ ಸರೋವರದೊಳೆಯ್ದುವರಸಂಚೆಯಂತೆ.

———— ——

# 'ರಾಗಿಣಿ'

## ಕೆಲವು ಅಭಿಪ್ರಾಯಗಳು

Ragini is a collection, the author's first, of some thirty pieces and reflects the delight of a young mind in the world of sensuous beauty stretching all about him Bird flower, wind, water, love and moonlight charm him; and some fine moments and pictures are captured in song and verse. . . 'One Night', 'O Light the Lamp', 'The Ranja Flower' 'The Devaraya Durga', 'The Parrots of Vijayanagar' and 'Kajana' (the singing wood-bird) are fine pieces.

—HINDU

ಭಾವ-ಅನುಭವಗಳ ಅನುಭಾವದಿಂದುಂಟಾದ ರಸದೊರತೆಯ ಬುಗ್ಗೆ ರಾಗಿಣಿ. ಕವಿಯು ಅನುಭವ ಭಾವದಲ್ಲಿ ವ್ಯಕ್ತವಾದಾಗ "ಬಳ್ಳಿಯಿಂದ ಹೂವು ಹೊಮ್ಮುವಂತೆ" ಹೊರಬಿದ್ದ ಕವನಗಳು ಕೆಲವು, ಕವಿಯು ಕೇವಲ ಭಾವೋನ್ಮಾದದ ಪರವಶತೆಯಲ್ಲಿ ಸಿಕ್ಕಿಬಿದ್ದಾಗ 'ಮುಗಿಲಿನಿಂದ ಮಿಂಚು ಹೊಮ್ಮುವಂತೆ' ಮಿಂಚಿದ ಕವನಗಳು ಕೆಲವು, ಅನುಭವದ ರಸಪಾಕವು 'ವೀಣೆಯಿಂದ ವಾಣಿ ಹೊಮ್ಮುವಂತೆ' ದನಿಗೆಯ್ವ ಕವನಗಳು ಕೆಲವು. ಇವೆಲ್ಲ 'ರಾಗಿಣಿ'ಯ ರಸದೊರತೆಗಳು.

—ಪ್ರಬುದ್ಧ ಕರ್ಣಾಟಕ

ಲೇಖಕರು ತಮ್ಮ ಕವನಗಳಿಗೆ ಬಳಕೆಯಲ್ಲಿರುವ ಸನ್ನಿವೇಶಗಳನ್ನೇ ಕಾವ್ಯವಸ್ತುವಾಗಿ ಪರಿಗ್ರಹಿಸಿರುವುದರಿಂದಲೂ ಮತ್ತು ರೂಢಿಯಲ್ಲಿರುವ ಪದಗಳನ್ನೇ ಉಪಯೋಗಿಸಿರುವುದರಿಂದಲೂ ಪದ್ಯಗಳು ಬಹಳ ಸುಲಭವಾಗಿ ಮನದಟ್ಟಾಗುವಂತೆ ಇವೆ ಕೇವಲ ಸಾಮಾನ್ಯವಾದ ಮತ್ತು ಸಹಜವಾಗಿ ನಮ್ಮ ಲಕ್ಷ್ಯಕ್ಕೇ ಬಾರದ ವಸ್ತುಗಳೇ, ಕವಿಯ ಪ್ರತಿಭೆಯಿಂದಲೂ ಕವಿತಾಶಕ್ತಿಯಿಂದಲೂ ಹೇಗೆ 'ರಸ'ವುಳ್ಳ ವಸ್ತುಗಳಾಗಿ ಮಾರ್ಪಾಡಾಗುವುವು ಎಂಬುದಕ್ಕೆ "ರಾಗಿಣಿ"ಯಲ್ಲಿನ ಕವನಗಳೇ ಉದಾಹರಣೆ . . . . . ಲೇಖಕರು ತಮ್ಮ ಪ್ರಸ್ತಾವನೆಯಲ್ಲಿ ಭಾವಗೀತೆ ಎಂದರೇನು, ಅದರ ರಚನೆ ಮತ್ತು ನಿರೂಪಣೆ ಹೇಗೆ, ಮುಂತಾದ ಭಾವಗೀತೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಬಹಳ ಸಾರವತ್ತಾಗಿ ವಿವರಿಸಿರುತ್ತಾರೆ.

—ಕತೆಗಾರ